# ಕೊಡಗು ಸಂಗಾತಿ

ಸೆಪ್ಟಂಬರ್ 1 ರಿಂದ 30, 2001 ಪಾಕ್ಷಿಕ ಪತ್ರಿಕೆ (ಕೋಣಾ 16-31 - ನಿರ್ಲಾಲ್ 1-14)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಯಲ್ಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 5 ಸಂಚಿಕೆ : 17-18 ಪುಟಗಳು : 24 ಬೆಲೆ ರೂ. : 6-00




## ವಾಸ್ತು ಶಾಸ್ತ್ರದ ವಾಸ್ತವಗಳು ಮತ್ತು ಶಾಸ್ತ್ರೀಯ ನಿಯಮಗಳು
## ದೇಹದ ವಕ್ರತೆಗೆ ಶಸ್ತ್ರಚಿಕಿತ್ಸೆ – ಗೇಹದ ವಕ್ರತೆಗೆ ವಾಸ್ತು ಚಿಕಿತ್ಸೆ

ವಿವರ : ಒಳಪುಟದಲ್ಲಿ.

## ಕೊಡಗು ಸಂಗಾತಿ ಪತ್ರಿಕೆಯ ಬೆಂಗಳೂರಿನ ಚಂದದಾರರಿಗೆ ಸಂತದಸದ ಸುದ್ದಿ

ದಿನಾಂಕ 16-9-2001ರಲ್ಲಿ ಬೆಂಗಳೂರಿನ ಕ್ವೀನ್ಸ್ ರಸ್ತೆ, ವಸಂತನಗರದ "ಜಸ್ಮಾ ಭವನ"ದಲ್ಲಿ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ವಾರ್ಷಿಕ ಮಹಾಸಭೆ ನಡೆಯಲಿರುವುದು. ಅಂದು ಕೊಡಗು ಸಂಗಾತಿ ಪತ್ರಿಕೆಯ ಪ್ರತಿನಿಧಿಗಳಾಗಿ ಕಲ್ಲುಮುಟ್ಲು ಬಸಪ್ಪ ಮತ್ತು ಪಟ್ಟಡ ಪ್ರಭಾಕರನವರು ಆಗಮಿಸಲಿರುವರು. ಇಲ್ಲೀ ತನಕ ನವೀಕರಿಸದೆ ಇರುವ ಚಂದದಾರರು ಈ ಅವಕಾಶ ಸದುಪಯೋಗ ಪಡೆದುಕೊಳ್ಳುವಂತೆ ಸವಿನಯ ವಿನಂತಿ

**ಸಂಪರ್ಕ ದೂರವಾಣಿ : 080 - 6500946** — ಸಂಪಾದಕಿ

**(ಕಲ್ಲು ಮುಟ್ಲು ಬಸಪ್ಪ)**

## ಕೊಡಗು ಸಂಗಾತಿ ಪತ್ರಿಕೆಯ ಕುಶಾಲನಗರ ಚಂದದಾರರಿಗೆ ಸುವಾರ್ತೆ

ಕೊಡಗು ಸಂಗಾತಿ ಪತ್ರಿಕೆಯ ಕುಶಾಲನಗರದ ಪ್ರತಿನಿಧಿಯಾಗಿರುವ ಶ್ರೀ ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ ಇಲ್ಲಿಗೆ ಪತ್ರಿಕೆಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರನವರು ದಿನಾಂಕ 9-9-2001ರಂದು ಶ್ರೀಯುತರ ಶಾಪಿಗೆ ಆಗಮಿಸಲಿರುವರು. ಈ ತನಕ ಪತ್ರಿಕೆ ಚಂದಹಣವನ್ನು ನವೀಕರಿಸದಿರುವ ಸದಸ್ಯರು ಅಂದು ನವೀಕರಿಸಿಕೊಳ್ಳುವಂತೆ ವಿನಂತಿ

**ಸಂಪರ್ಕ ದೂರವಾಣಿ : 08272 / 73370** — ಸಂಪಾದಕಿ

**(ಕುಂಭಗೌಡನ ಸೋಮಣ್ಣ)**

## ವೀರಾಜಪೇಟೆ ತಾಲ್ಲೂಕಿನ ಚಂದದಾರರ ಗಮನಕ್ಕೆ

ವೀರಾಜಪೇಟೆ ತಾಲ್ಲೂಕಿನ ನಮ್ಮ ಕೊಡಗು ಸಂಗಾತಿ ಪತ್ರಿಕೆಯ ಚಂದದಾರರು ತಮ್ಮ ಚಂದಾ ಹಣ/ಜಾಹೀರಾತು ಇತ್ಯಾದಿಗಳಿಗೆ ನಮ್ಮ ಪ್ರತಿನಿಧಿಯಾಗಿರುವ ಶ್ರೀ ಬಾರಿಕೆ ಮನೋಜ್ ಕುಮಾರ್‌ನವರನ್ನು ಸಂಪರ್ಕಿಸುವುದು. ಇಲ್ಲವೇ ನೇರವಾಗಿ ಸಂಗಾತಿ ಕಛೇರಿಗೆ Cheque/M.O./D.D./ನಗದು ಮೂಲಕ ಕಳುಹಿಸುವುದು. ವಾಯಿದೆಗೆ ಸರಿಯಾಗಿ ನವೀಕರಣಗೊಳ್ಳಲು ಸರ್ವರ ಸಹಕಾರ ಅಗತ್ಯ

**ಪ್ರಕಟಣೆ :**
**ಪ್ರಸರಣಾಧಿಕಾರಿ, ಕೊಡಗುಸಂಗಾತಿ**
**ಮೈಸೂರು - ☎ : 0821 / 516771**

**ಶ್ರೀ ಬಾರಿಕೆ ಮನೋಜ್‌ಕುಮಾರ್**
ಇಗ್ಗುತ್ತಪ್ಪ ಕೋಲ್ಡ್ ಸ್ಟೋರೇಜ್
ಖಾಸಗಿ ಬಸ್‌ನಿಲ್ದಾಣ, ವೀರಾಜಪೇಟೆ
☎ : 08274 - 56591

## ಉನ್ನತ ಶ್ರೇಣಿಯಲ್ಲಿ ತೇರ್ಗಡೆ

ಕುಮಾರಿ ಸೂದನ ಎಸ್. ಕೃತಿಶ್ರೀ ಸೋಮವಾರ ಪೇಟೆ ಸಂತ ಜೋಸೆಫ್ ಶಾಲೆಯ ವಿದ್ಯಾರ್ಥಿನಿ. ಇವಳು 2000 - 2001ನೇ ಸಾಲಿನ ಎಸ್. ಎಸ್. ಎಲ್.ಸಿ. ಪಬ್ಲಿಕ್ ಪರೀಕ್ಷೆಯಲ್ಲಿ 576 ಅಂಕಗಳೊಂದಿಗೆ (92.16%) ತೇರ್ಗಡೆಯಾಗಿರುತ್ತಾಳೆ.

ಇವಳ ಉಜ್ವಲ ಭವಿಷ್ಯಕ್ಕೆ ಶುಭವನ್ನು ಕೋರುವ



**ಕುಮಾರಿ ಸೂದನ ಎಸ್. ಕೃತಿಶ್ರೀ**

ತಂದೆ : ಸೂದನ ಎಸ್. ಸೋಮಣ್ಣ
ತಾಯಿ : ಸೂದನ ಯಾದವತಿ ಸೋಮಣ್ಣ ಹಾಗೂ
ಶ್ರೀಮತಿ ಬಲ್ಲಡ್ಕ ಕಾವೇರಮ್ಮ, ಮಡಿಕೇರಿ
ಶ್ರೀಮತಿ ಮತ್ತು ಶ್ರೀ ಮೂಲೆಮನೆ ತಿಮ್ಮಪ್ಪ, ಮಡಿಕೇರಿ
ಶ್ರೀಮತಿ ಮತ್ತು ಶ್ರೀ ತೆಕ್ಕಡೆ ಲಕ್ಷ್ಮಣ, ಗೋಣಿಕೊಪ್ಪ
ಶ್ರೀಮತಿ ಮತ್ತು ಶ್ರೀ ಕೆಮ್ಮಾರನ ಮೊಣ್ಣಪ್ಪ
ಶ್ರೀಮತಿ ಮತ್ತು ಶ್ರೀ ಕೆಮ್ಮಾರನ ಬಾಲಕೃಷ್ಣ
ಶ್ರೀಮತಿ ಮತ್ತು ಶ್ರೀ ಕೆಮ್ಮಾರನ ಬಿದ್ದಪ್ಪ
ಶ್ರೀಮತಿ ಮತ್ತು ಶ್ರೀ ಕೆಮ್ಮಾರನ ಉತ್ತಯ್ಯ ಮತ್ತು ಮನೆಯವರು



# 2001, ಸೆಪ್ಟೆಂಬರ್ 1 ರಿಂದ 30ರ ತನಕ

## ಒಳನೋಟ





| | |
|---|---|
|  **ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ** | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
|  **ಮಡಿಕೇರಿಯಲ್ಲಿ ಸಂಗಾತಿ ಕಛೇರಿ** | **ಬೈತಡ್ಕ ಜಾನಕಿ ಬೆಳ್ಯಪ್ಪ,** ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
|  **ಚಿಹ್ನೆ, ಹಸೆಮಣೆ/ಶುಭಾಶಯ ಕಾರ್ಡ್ಸ್ ಕ್ಯಾಸೆಟ್/ಕೀ ಚೈನ್ ಲಭ್ಯ** | **ಕುಂಭಗೌಡನ ಪ್ರವೀಣ್ ಕುಮಾರ್, ವೆಜಿಟೆಬಲ್ ಶಾಪ್,** ಪಾಂಡನ ಕಾಂಪೌಂಡ್, ಅಪ್ಪಯ್ಯ ಗೌಡ ರಸ್ತೆ, ಮಡಿಕೇರಿ. |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, ಫೋನ್ : 080/6500946 |

 ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 6 ರೂ., ಅರ್ಧ ವಾರ್ಷಿಕ -75 ರೂ., ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಗೌಡ ಫೆಡರೇಷನ್ (ಒಕ್ಕೂಟ)

ಕೊಡಗಿನ ಗೌಡಸಮಾಜಗಳ ಒಕ್ಕೂಟದ ಸ್ಥಾಪನೆಯ ವಿಷಯ ಸಂತೋಷಕರದ ಬೆಳವಣಿಗೆ. ಈಗಿನ ಪರಿಸ್ಥಿತಿಯಲ್ಲಿ ಪ್ರತಿ ಗ್ರಾಮಗಳಲ್ಲೂ ಹಾಗೂ ಒಂದೊಂದು ಪಂಚಾಯಿತಿಗಳಲ್ಲಿ ಸಮಾಜ ಸ್ಥಾಪನೆಯಾಗುತ್ತಿರುವುದು ಖುಷಿ ಕೊಡುವ ವಿಚಾರ. ಅಳಿದು ಹೋಗುತ್ತಿರುವ ನಮ್ಮ ಗೌಡ ಸಂಸ್ಕೃತಿಯ ಪುನರ್‌ಶ್ಚೇತನಕ್ಕೆ ಈ ಬೆಳವಣಿಗೆ ತುಂಬು ಸಹಾಯಕವಾಗಬಹುದು.

ಒಂದು ಕಡೆ ಈ ರೀತಿಯ ಸಂಘಟನೆಯಾಗುತ್ತಿರುವಾಗ ಈ ಎಲ್ಲಾ ಸಂಘ ಸಂಸ್ಥೆಗಳು ಒಂದೇ ರೀತಿಯ ನಿಲುವನ್ನು ತಾಳಬೇಕಾದರೆ ಅವುಗಳು ಒಂದಕ್ಕೊಂದು ಹೊಂದಿಕೊಂಡು ಹೋಗುವಂತಾಗಬೇಕು. ಹೀಗೆ ಹೊಂದಿಕೊಳ್ಳಬೇಕಾದರೆ ಈ ಸಂಘ ಸಂಸ್ಥೆಗಳಿಗೆ ಅನ್ವಯಿಸುವಂತಹ ಒಂದೇ ರೀತಿ ನೀತಿಯ ನಿಯಮಗಳು ಅವಶ್ಯವಿರುತ್ತದೆ. ಇಂತಹ ಒಂದೇ ಪ್ರಾಕಾರದ ರೀತಿ ನಿಯಮಾವಳಿಗಳನ್ನು ಒಂದು ಪರಿಧಿಯೊಳಗೆ ರೂಪಿಸುವ ಒಂದು ಕೇಂದ್ರ ಸಂಸ್ಥೆ ಅತೀ ಅವಶ್ಯಕವಾದುದರಿಂದ ಕೊಡಗಿನಲ್ಲಿ ಈಗ ಸ್ಥಾಪಿಸಲಾಗುತ್ತಿರುವ ಗೌಡ ಸಂಘ ಸಂಸ್ಥೆಗಳ ಒಕ್ಕೂಟ (Federation). ಕೊಡಗಿನ ಗೌಡರ ಎಲ್ಲಾ ಸಂಘ ಸಂಸ್ಥೆಗಳು ಈ ಒಕ್ಕೂಟ (Federation) ಕೈಗೊಳ್ಳುವ ತೀರ್ಮಾನಗಳಿಗೆ ಬದ್ಧವಾಗಿರಬೇಕು. ಈ ರೀತಿಯ ಬದಲಾವಣೆ ಆದರೆ ಮಾತ್ರ ಒಂದು ಜನಾಂಗದ ಸಂಸ್ಕೃತಿ, ಭಾಷೆ, ಆರ್ಥಿಕ, ವಿದ್ಯಾಭ್ಯಾಸದ ಬೆಳವಣಿಗೆಗೆ ಪೂರಕವಾಗಿರುತ್ತದೆ. ಇಲ್ಲದಿದ್ದ ಪಕ್ಷದಲ್ಲಿ ಒಂದೊಂದು ಸಂಸ್ಥೆಗಳು ತನ್ನದೇ ಆದ ರೀತಿ ನೀತಿಗಳನ್ನು ಅಳವಡಿಸಿಕೊಂಡರೆ ಒಂದು ಸಂಸ್ಥೆಯ ರೂಪುರೇಷೆಗಳು ಇನ್ನೊಂದು ಸಂಸ್ಥೆಯ ರೀತಿ ನೀತಿಗಳೊಡನೆ ಸಮ್ಮಿಳನವಾಗುವುದರಿಂದ ಘರ್ಷಣೆ ಸಂಭವಿಸುವುದನ್ನು ತಪ್ಪಿಸಬಹುದು. ಗ್ರಾಮ ಹಂತದ, ಹೋಬಳಿ (ನಾಡಿನ) ಹಂತದ, ತಾಲ್ಲೂಕು ಹಂತದ ಹಾಗೂ ಜಿಲ್ಲೆಯ ವಿವಿಧ ಸಂಸ್ಥೆಗಳ ಒಕ್ಕೂಟ ಕೇಂದ್ರಿಕೃತ -ವಿಕೇಂದ್ರಿಕೃತ ತತ್ವದ ಮೇಲ ಕಾರ್ಯ ನಿರ್ವಹಿಸಬೇಕು. ಈ ರೀತಿ ಕಾರ್ಯ ನಿರ್ವಹಿಸಿದರೆ ಮಾತ್ರ ಸಮಾಜದ ಏಕರೂಪ, ನೀತಿ, ಸಂಹಿತೆಯನ್ನು ಅಳವಡಿಸಲು ಸಾಧ್ಯವಾಗುವುದು.

ಈ ಮೇಲಿನ ಒಕ್ಕೂಟ (Federation) ಸ್ಥಾಪನೆಗೆ ಹಾಗೂ ಅದರ ಕಾರ್ಯ ನಿರ್ವಾಹಣಕ್ಕೆ ಹಣ ಬೇಕೆ ಬೇಕು. ಈ ಹಣವನ್ನು ಗ್ರಾಮ ಮಟ್ಟದ, ಹೋಬಳಿ ಮಟ್ಟದ, ತಾಲ್ಲೂಕು ಮಟ್ಟದ ಹಾಗೂ ಜಿಲ್ಲಾ ಮಟ್ಟದ ಸಂಘಟನೆಗಳು ತಮ್ಮ ಉತ್ಪತ್ತಿಯ ಸ್ವಲ್ಪ ಭಾಗವನ್ನು ಒಕ್ಕೂಟಕ್ಕೆ (Federation) ವಂತಿಗೆ ನೀಡಬೇಕು. ಅಲ್ಲದೆ ಪ್ರತಿಯೊಂದು ಸಂಘ ಸಂಸ್ಥೆಗಳಲ್ಲಿರುವ ಉಪನಿಯಮ (ಬೈಲಾ)ಗಳನ್ನು ಬದಲಾಯಿಸಿ ಅವುಗಳ ಸಂಪರ್ಕ, ನಿಯತ್ತು "ಒಕ್ಕೂಟ"ಕ್ಕೆ ಹೇಗಿರಬೇಕು? ಒಂದೊಂದು ಸಂಘ ಸಂಸ್ಥೆಯಿಂದ ಒಕ್ಕೂಟಕ್ಕೆ ಎಷ್ಟೆಷ್ಟು ಜನರನ್ನು ಆಯ್ಕೆ ಮಾಡಬೇಕೆಂಬ ಅಂಶ ಇತ್ಯಾದಿಗಳನ್ನು ಸೇರಿಸಬೇಕಾಗುತ್ತದೆ.

ಒಕ್ಕೂಟದ ಬೈಲಾ ನೊಂದಣಿ ಆದ ನಂತರ ಪ್ರತಿಯೊಂದು ಅಂಗ ಸಂಸ್ಥೆಗಳಿಂದ ಆರಿಸಲ್ಪಟ್ಟ ಸದಸ್ಯರ ಮಹಾಸಭೆಯನ್ನು ಕರೆದು ಆ ಮಹಾಸಭೆಯಲ್ಲಿ ಮುಖ್ಯವಾದ ಅಂಶಗಳನ್ನು ಆರಿಸಿ ಚರ್ಚಿಸಬೇಕಾಗುತ್ತದೆ. ಸಭೆಯ ತೀರ್ಮಾನದಂತೆ ಅಂಗ ಸಂಸ್ಥೆಗಳು ಈ ತೀರ್ಮಾನಗಳಿಗೆ ಬದ್ಧರಾಗಿರಬೇಕಾಗುತ್ತದೆ. ಒಕ್ಕೂಟವು ಅಂಗ ಸಂಸ್ಥೆಗಳ ದೈನಂದಿನ ಆಡಳಿತಕ್ಕೆ ಕೈಹಾಕಬಾರದು. ಚಂದ ವಸೂಲಾತಿ, ಹಣದ, ವ್ಯವಹಾರ, ಸಿಬ್ಬಂದಿಗಳ ಮೇಲ್ವಿಚಾರಣೆ, ಸಂಘ ಸಂಸ್ಥೆಗಳ ಆಡಳಿತ ಅಧಿಕಾರ ಮುಂತಾದವು ಆಯಾಯ ಅಂಗ ಸಂಸ್ಥೆಗಳ ಅಧಿಕಾರದಲ್ಲಿಯೇ ಒಳಪಟ್ಟಿರಬೇಕು.

ಸುಳ್ಯದಲ್ಲಿರುವ ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಅಭಿವೃದ್ಧಿ ಸಂಘವು ಈ ಮೇಲಿನ ಒಕ್ಕೂಟದ ಸುಪರ್ದಿಗೆ ಬರುವುದೊಳಿತು. ಅಂದ ಹಾಗೆ 1985 ಮತ್ತು 1996ರ ಗೌಡ ಸಮ್ಮೇಳನವು ದ. ಕ ಮತ್ತು ಕೊಡಗು ಜಿಲ್ಲೆಯ ಅರೆಭಾಷೆಯ ಹತ್ತು ಕುಟುಂಬ ಮತ್ತು ಹದಿನೆಂಟು ಗೋತ್ರದ ಜನರ ಸಮ್ಮೇಳವಾಗಿತ್ತು ಎಂಬುದನ್ನು ಇಲ್ಲಿ ಯಾರು ಮರೆಯಬಾರದು. ಅಂದ ಹಾಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಹತ್ತು ಕುಟುಂಬ ಹದಿನೆಂಟು ಗೋತ್ರದ ಎಲ್ಲಾ ಸಂಘ ಸಂಸ್ಥೆಗಳು, ಸಮಾಜಗಳು, ವಿದ್ಯಾಸಂಘ ಮುಂತಾದ ಎಲ್ಲವು ಈ ಕೊಡಗು ಗೌಡ ಒಕ್ಕೂಟದ ಅಂಗ ಸಂಸ್ಥೆಯಾಗಿ ಇದರ ಪರಿಧಿಯೊಳಗೆ ಕಾರ್ಯ ನಿರ್ವಹಿಸಿದಲ್ಲೂ ಶತಮಾನಗಳಿಂದ ತುಳಿತಕ್ಕೊಳಪಟ್ಟು, ನಿರ್ಲಕ್ಷಿಸಲ್ಪಟ್ಟು ಉತ್ತಮ ಸಂಸ್ಕೃತಿಯನ್ನು ಹೊಂದಿ ಇಂದು ಎಲ್ಲರ ಕಣ್ಮುಂದೆನೆ ಅವಸಾನದ ಅಂಚಿಗೆ ಸರಿದಿರುವ ಈ ಅಮೋಘ ಗೌಡ ಸಂಸ್ಕೃತಿಯ ಉನ್ನತಿಯ ಉತ್ಪನ್ನಕ್ಕೆ ಈ ಒಕ್ಕೂಟದ ವ್ಯವಸ್ಥೆಯು ಅವಕಾಶ ಕಲ್ಪಿಸಲಿ. ಒಗ್ಗಟ್ಟು, ಸಂಸ್ಕೃತಿ, ಭಾಷೆ, ತನ್ನತನ, ನನ್ನತನ, ಸ್ವಂತಿಕೆಗಳಿಗೆ ನಾಂದಿಯಾಗಿ ಮುಂಬರುವ ಯುವ ಪೀಳಿಗೆಗೆ ದಾರಿದೀಪವಾಗಲೆಂದು ಕುಲದೈವವನ್ನು ನೆನೆಯುತ್ತಾ ಸಂಗಾತಿ ಈ ಸಂದರ್ಭದಲ್ಲಿ ಶುಭವನ್ನು ಹಾರೈಸುತ್ತದೆ. ಹಾಗೂ ಗೌಡ ಸಂಯುಕ್ತ ರಂಗ, ಗೌಡ ಫೆಡರೇಷನ್ನಿನ ಉದಯದ ಚಿಂತನೆಯೊಂದನೆ ಒಂದು ಜನಾಂಗದ ಅಭಿವೃದ್ಧಿಯೇ ಒಂದು ದೇಶದ ಪ್ರಗತಿಯೆಂಬ ನಿಲುವನ್ನು ಸಂಗಾತಿ ಪ್ರತಿಪಾದಿಸುತ್ತದೆ.

## ನಗೆ ಮಾತ್

| | | |
|---|---|---|
| ಪ್ರಯಾಣಿಕ | : | ಕಾಫಿ / ಟೀ ಕುಡ್ಡು ಬಾಕೆ ಮುಟ್ಟ ಬಸ್ಸ್ ಇದ್ದದ್ದೋ? |
| ಕಂಡಕ್ಟರ್ | : | ಇದ್ದದೆ |
| ಪ್ರಯಾಣಿಕ | : | ಯಾವ ಗ್ಯಾರಂಟಿ ಕಂಡಕ್ಟರೆ? |
| ಕಂಡಕ್ಟರ್ | : | ಡ್ರೈವರನ ಒಟ್ಟಿಗೆ ಕರ್ಕೊಂಡೋಗಿ |

ಮುಕ್ಕಾಟಿ ಮೋಹನ ಕಾರ್ಯಪ್ಪ
ಮರಗೋಡು

# ಕೊಡಗು ಗೌಡ ಫೆಡರೇಷನ್‌ನ ಮಹತ್ವದ ಸಭೆಯ ನಡವಳಿಕೆಗಳು

ಸೂರ್ತಲೆ ಸೋಮಣ್ಣ

ಮಾನ್ಯರೆ,

ಕೊಡಗು ಜಿಲ್ಲೆಯಲ್ಲಿ ಗೌಡ ವಿದ್ಯಾಸಂಘ, ಗೌಡ ಸಮಾಜಗಳು ಮತ್ತು ಹಲವು ಗೌಡ ಸಂಘಟನೆಗಳು ಚಾಲನೆಯಲ್ಲಿದ್ದು ಇವುಗಳು ತಮ್ಮದೇ ಆದ ಬೈಲಾಗಳ ಅಡಿಯಲ್ಲಿ ತಮ್ಮದೇ ಆದ ವ್ಯಾಪ್ತಿಯಲ್ಲಿಉತ್ತಮ ಅಭಿವೃದ್ಧಿ ಕಾರ್ಯಗಳನ್ನು ನಡೆಸುತ್ತಿರುವುದು ಸರಿಯಷ್ಟೆ. ಇದರಲ್ಲಿ ಕೆಲವು ಸಮಾಜಗಳು ಮತ್ತು ಸಂಘಟನೆಗಳು ಜಿಲ್ಲೆಯ ಹೊರಗೂ ರಾಜ್ಯಾದ್ಯಂತ ಸಹ ಚಾಲನೆಯಲ್ಲಿರುವುದಾಗಿದೆ.

ಈ ಸಮಾಜ / ಸಂಘಟನೆಗಳಿಗೆ ಒಂದು ನಿಯಂತ್ರಣವನ್ನು ಕಲ್ಪಿಸುವುದರೊಂದಿಗೆ ಒಂದಕ್ಕೊಂದು ಬಾಂಧವ್ಯದ ಕೊಂಡಿಯನ್ನು ಜೋಡಿಸುವ ಕಾರ್ಯಕ್ಕಾಗಿ, ಚಾಲನೆಯಲ್ಲಿರುವ ಹೆಚ್ಚಿನ ಎಲ್ಲಾ ಸಮಾಜಗಳ ಅಧ್ಯಕ್ಷರನ್ನು, ಕಾರ್ಯದರ್ಶಿಗಳನ್ನು ಹಾಗೂ ಸಮಾಜದ ಇನ್ನಿತರ ಗಣ್ಯರನ್ನು ಆಹ್ವಾನಿಸಿ ಒಗ್ಗೂಡಿಸಿ ಅವರೊಂದಿಗೆ ಚರ್ಚಿಸಿ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸಲು ಶಕ್ತವಾಗುವಂಥ ಒಂದು ಗೌಡ ಫೆಡರೇಷನ್ ಸ್ಥಾಪನೆಗೆ ಅಡಿಗಲ್ಲು ಹಾಕುವ ಒಂದು ಉತ್ತಮ ಕಾರ್ಯದ ಹೆಜ್ಜೆಯಾಗಿ ಪ್ರಥಮವಾಗಿ ಕೊಡಗು ಗೌಡ ಸಮಾಜ, ಮಡಿಕೇರಿ ಇವರ ಚಿಹ್ನೆ ಅಡಿಯಲ್ಲಿ ದಿನಾಂಕ 11-02-2001ರಂದು ಮಡಿಕೇರಿಯ ಹೋಟೆಲ್ ಅಮೃತದಲ್ಲಿ ಸಭೆ ಕರೆಯಲಾಯಿತು.

ಈ ಸಭೆಗೆ ಸುಮಾರು 25 ಮಂದಿ ಜನಾಂಗದ ಪ್ರಮುಖ ಆಹ್ವಾನಿತರು ಹಾಜರಿದ್ದರು. ಈ ಸಭೆಯ ಅಧ್ಯಕ್ಷತೆಯನ್ನು ಕೊಡಗು ಗೌಡ ಸಮಾಜದ ಅಧ್ಯಕ್ಷರಾದ ತೋಟಂಬೈಲು ನಾಣಯ್ಯನವರು ವಹಿಸಿದ್ದರು. ಈ ಸಭೆಯಲ್ಲಿ ಗೌಡ ಫೆಡರೇಷನ್‌ನ ವ್ಯಾಪ್ತಿ ಹಾಗೂ ಕಾರ್ಯವೈಖರಿ ಬಗ್ಗೆ ತೀವ್ರ ಚರ್ಚಿಸಲಾಗಿ ಸ್ಥಾಪನೆಯಾಗಲಿರುವ ಫೆಡರೇಷನ್ ಕೊಡಗು ಗೌಡರಿಗೆ ಮಾತ್ರ ಸೀಮಿತವಾಗಿ ಪ್ರಥಮವಾಗಿ ರಚನೆಗೊಂಡ ತದನಂತರ ಅದರ ವ್ಯಾಪ್ತಿಯನ್ನು ವಿಸ್ತರಿಸುವುದು ಎಂದು ತೀರ್ಮಾನಿಸಲಾಯಿತು.

ಫೆಡರೇಷನ್‌ನ ಪ್ರಧಾನ ಸಂಚಾಲಕರಾಗಿ ಕಾಳೇರಮ್ಮನ ಪಾಲಾಕ್ಷನವರನ್ನು ಒಮ್ಮತದಿಂದ ಆಯ್ಕೆ ಮಾಡಲಾಯಿತು. ಉಪ ಸಂಚಾಲಕರಾಗಿ ಕೋರನ ಪೂಣಚ್ಚ ಹಾಗೂ ಬೇಕಲು ಜಯರಾಮ ಗೌಡರವರನ್ನು ಆಯ್ಕೆ ಮಾಡಲಾಯಿತು. ಗೌರವ ಕಾರ್ಯದರ್ಶಿಗಳಾಗಿ ಶ್ರೀ ಪೈಕೇರ ಅನಂತರಾಮರವರನ್ನು ಆಯ್ಕೆ ಮಾಡಲಾಯಿತು.

ದಿನಾಂಕ 11-3-2001ರಂದು ಫೆಡರೇಷನ್ ಸ್ಥಾಪನೆಗೆ ಚಾಲನೆ ಕೊಡುವ ಉದ್ದೇಶದಿಂದ ಕೊಡಗು ಗೌಡ ಸಮಾಜದ ಅಧ್ಯಕ್ಷರಾದ ತೋಟಂಬೈಲು ನಾಣಯ್ಯನವರ ಅಧ್ಯಕ್ಷತೆಯಲ್ಲಿ ಕೊಡಗು ಗೌಡ ಸಮಾಜದ ಕಟ್ಟಡದಲ್ಲಿ ಸಭೆಯನ್ನು ಕರೆಯಲಾಯಿತು. ಸಭೆಗೆ ಬೆಂಗಳೂರಿನ ಕೊಡಗು ಗೌಡ ಸಮಾಜದ ಅಧ್ಯಕ್ಷರಾದ ಶ್ರೀಮಾನ್ ಅಮ್ಮವನ ವಾಸುರವರು ಹಾಜರಿದ್ದರು. ಶ್ರೀ ಅಮ್ಮವನ ವಾಸುರವರು ಈ ಫೆಡರೇಷನ್ ಸ್ಥಾಪನೆಯ ರೂವಾರಿಗಳಲ್ಲೊಬ್ಬರೆಂದು ಉಲ್ಲೇಖಿಸಿದರೆ ತಪ್ಪಾಗಲಾರದು. ಅತ್ಯಂತ ಮುತುವರ್ಜಿಯಿಂದ ಫೆಡರೇಷನ್ ಸ್ಥಾಪನೆಗೆ ತನ್ನ ಶಕ್ತಿ ಮೀರಿ ಶ್ರಮಿಸುತ್ತಿರುವ ಮಹನೀಯರಿವರು. ದಿನಾಂಕ 11-3-2001ರ ಸಭೆಯಲ್ಲಿ ಮುಂದಿನ ಹೆಜ್ಜೆಯ ಬಗ್ಗೆ ತೀವ್ರವಾಗಿ ಚರ್ಚಿಸಲಾಯಿತು. ಈ ಸಭೆಯಲ್ಲಿ ಮೇಲಿನ ಪದಾಧಿಕಾರಿಗಳನ್ನು ಆಯ್ಕೆ ಮಾಡಲಾಯಿತು.

ಶ್ರೀಮಾನ್ ಬೇಕಲು ಜಯರಾಮ ಪ್ರಧಾನ ಸಂಚಾಲಕರಾಗಿಯೂ ಶ್ರೀಮಾನ್ ಅಮ್ಮವನ ವಾಸು, ಉಪ ಸಂಚಾಲಕರಾಗಿಯೂ ಶ್ರೀಮಾನ್ ಸೂರ್ತಲೆ ಆರ್. ಸೋಮಣ್ಣ, ಗೌ. ಕಾರ್ಯದರ್ಶಿ ಆಗಿ ಆಯ್ಕೆ ಆದರು.

ಅಂದಿನ ಸಭೆಯಲ್ಲಿ ತೀರ್ಮಾನವೊಂದನ್ನ ಕೈಗೊಂಡು ಪ್ರಥಮವಾಗಿ ಫೆಡರೇಷನ್‌ಗೆ ಅಗತ್ಯವಿರುವ ಕರಡು ಬೈಲಾವನ್ನು ತಯಾರಿಸಬೇಕೆಂದು ತೀರ್ಮಾನಿಸಿ ಈ ಕೆಳಗಿನ ಮಹನೀಯರನ್ನು ಕರಡು ಬೈಲಾ ನಿರ್ಮಾಣ ಕಮಿಟಿ ಸದಸ್ಯರನ್ನಾಗಿ ಆಯ್ಕೆ ಮಾಡಲಾಯಿತು.

ಶ್ರೀಯುತರಾದ.

| | |
|---|---|
| ಬೇಕಲ್ ಜಯರಾಮಗೌಡ | ತೆಕ್ಕಡೆ ನೇಮಿರಾಜ |
| ಅಮ್ಮವ್ವನ ವಾಸು | ದಂಬೆಕೋಡಿ ಚಿನ್ನಪ್ಪ |
| ಸೂರ್ತಲೆ ಸೋಮಣ್ಣ | ದಂಬೆಕೋಡಿ ಮಾದಪ್ಪ |
| ತೋಟಂಬೈಲು ನಾಣಯ್ಯ | ಕೋರನ ಪೂಣಚ್ಚ |
| ಕಾಳೇರಮ್ಮನ ಪಾಲಾಕ್ಷ | |

ದಿನಾಂಕ 26-7-2001 ರಂದು ಮೇಲಿನ ಗೌಡ ಫೆಡರೇಷನ್ ಕರಡು ಬೈಲಾ ನಿರ್ಮಾಣ ಸಮಿತಿ ಸಭೆ ಸೇರಿ ಶ್ರೀ ತೆಕ್ಕಡೆ ಎಸ್. ನೇಮಿರಾಜರವರ ನೇತೃತ್ವದಲ್ಲಿ ಒಂದು ಕರಡು ಬೈಲಾವನ್ನು ತಯಾರಿ ಮಾಡಿರುವುದಾಗಿದೆ.

ಮೇಲಿನಂತೆ ತಯಾರು ಮಾಡಲಾದ ಕರಡು ಬೈಲಾದ ಬಗ್ಗೆ ಚರ್ಚಿಸಿ ಇದಕ್ಕೆ ಅಂತಿಮ ರೂಪ ರೇಷೆಗಳನ್ನು ನೀಡುವ ಉದ್ದೇಶಕ್ಕಾಗಿ ದಿನಾಂಕ 12-8-2001 ರಂದು ಕೊಡಗು ಗೌಡ ಸಮಾಜದಲ್ಲಿ ಕೊಡಗು ಗೌಡ ಸಮಾಜ /ಸಂಘಟನೆಗಳ ಅಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಜನಾಂಗದ ಇತರ ಪ್ರಮುಖರ ಸಭೆಯನ್ನು ಕರೆಯಲಾಯಿತು. ಸಭೆಯ ಅಧ್ಯಕ್ಷತೆಯನ್ನು ಮಾಜಿ ಕರ್ನಾಟಕ ಸರಕಾರದ ಮಾಜಿ ಮಂತ್ರಿಗಳಾದ ದಂಬೆಕೋಡಿ ಚಿನ್ನಪ್ಪನವರು ವಹಿಸಿದ್ದರು.

ಸಭೆಗೆ ಕರಡು ಬೈಲಾವನ್ನು ವಕೀಲರಾದ ಶ್ರೀಮಾನ್ ತೆಕ್ಕಡೆ ಎಸ್. ನೇಮಿರಾಜರವರು ಓದಿ ತಿಳಿಹೇಳಿದರು. ಈ ಬೈಲಾವನ್ನು ಕನ್ನಡದಲ್ಲಿ ಅಳವಡಿಸಬೇಕೆಂದು ಶ್ರೀಮಾನ್ ಪಂಜಿಪಳ್ಳ ವೆಂಕಪ್ಪ, ತುಂತಜೆ ಗಣೇಶ, ಪಟ್ಟಡ ಪ್ರಭಾಕರ ಹಾಗೂ ಇನ್ನಿತರರು ಒತ್ತಾಯಿಸಿದ ಮೇರೆ ಶೀಘ್ರವೇ ಇಂಗ್ಲೀಷ್ ಹಾಗೂ ಕನ್ನಡ ಎರಡರಲ್ಲೂ ಬೈಲಾವನ್ನು ತಯಾರಿಸುವಂತೆ ಸಭೆ ತೀರ್ಮಾನಿಸಲಾಯಿತು.

ಫೆಡರೇಷನ್‌ನ ಸದಸ್ಯತನವು ಗೌಡ ಸಮಾಜ/ಸಂಘಗಳ

ಮುಂದಿನ ಪುಟಕ್ಕೆ

# ಗೌಡ ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು

ಗೌಡ ಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘದ ವಾರ್ಷಿಕ ಸಭೆಯ 12-8-2001 ರಂದು ಬೆಂಗಳೂರು ಹೊರವಲಯದ ಅಲ್ಲಾಳು ಗ್ರಾಮದ ಶ್ರೀ ವೈ. ವೆಂಕಪ್ಪ ಇವರ ನಿವಾಸದಲ್ಲಿ ನಡೆಯಿತು. ಪೋಲಿಸ್ ಉಪ ಅಧೀಕ್ಷಕರಾದ ಶ್ರೀ ಬೈತಡ್ಕ ಎ. ಜೋಯಪ್ಪ ನವರು ಮುಖ್ಯ ಅತಿಥಿಗಳಾಗಿಯೂ ಮತ್ತು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರಾದ ಶ್ರೀ ನಂಗಾರು ಆರ್. ನಾಣಯ್ಯ ನವರು ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದರು.

ಸಾಂಪ್ರದಾಯಿಕ ಪೂಜೆ ಮತ್ತು ಪ್ರಾರ್ಥನೆಯೊಂದಿಗೆ ಕಾರ್ಯಕ್ರಮವನ್ನು ನಿರೂಪಿಸಿದ ಸಂಘದ ಕಾರ್ಯದರ್ಶಿ ಶ್ರೀ ಉಡುದೋಳಿರ ಎಲ್. ಸೋಮಪ್ಪನವರು ಆಹ್ವಾನಿತರನ್ನು ಸ್ವಾಗತಿಸಿದರು. ಅಲ್ಲದೆ ಸಂಘದ ಅಧ್ಯಕ್ಷರಾಗಿದ್ದ ದಿ. ಶ್ರೀ ದೇವಜನ ರಾಜುರವರ ನಿಧನಕ್ಕೆ ಎರಡು ನಿಮಿಷ ಮೌನ ಆಚರಿಸಿ ಶೋಕ ವ್ಯಕ್ತಪಡಿಸಲಾಯಿತು.

ಸದರಿ ಸಂಘದ ಸದಸ್ಯರಿಂದ ಸಂಗ್ರಹಿಸಿದ ಮೂಲ ಧನವನ್ನು ಸಂರಕ್ಷಿಸಿಕೊಂಡು ಪಡೆದ ಲಾಭದಿಂದ ಪ್ರತೀ ವರ್ಷ ಸದಸ್ಯರೆಲ್ಲರನ್ನೂ ಆಮಂತ್ರಿಸಿ ಸತ್ಕರಿಸುವುದು ಅಲ್ಲದೆ ಇತರೆ ಸವಲತ್ತುಗಳನ್ನು ಒದಗಿಸುವುದು ಸಂಘದ ಉದ್ದೇಶವೆಂದೂ ಮತ್ತು ಲಾಭ ಗಳಿಸುವುದೊಂದೆ ಸಂಘದ ಉದ್ದೇಶವಲ್ಲವೆಂದೂ, ಹಾಗೂ ಜಮಾ ಖರ್ಚಿನ ಮಾಹಿತಿಯನ್ನಾಧರಿಸಿ ವರದಿಯನ್ನು ಖಜಾಂಚಿ ಶ್ರೀ ಜೈನೀರ ಧನಂಜಯ ಮಂಡಿಸಿದರು.

ಅತಿಥಿಗಳಾಗಿ ಇನ್ನೊಬ್ಬ ಸಭೆಯನ್ನುದ್ದೇಶಿಸಿ ಮಾತಾಡಿದ ಶ್ರೀ ನಂಗಾರು ನಿಂಗರಾಜುರವರು ಇಂತಹ ಸಂಘಗಳು ಗೌಡ ಸಮಾಜದ ಅಂಗ ಸಂಸ್ಥೆಗಳಾಗುವುದು ಸ್ವಾಗತಾರ್ಹವೆಂದು ತಿಳಿಸಿ, ಸಂಘದ ಕಾರ್ಯಕ್ರಮಗಳನ್ನು ಪ್ರಶಂಸಿದರು. ನಂತರ ಮುಖ್ಯ ಅತಿಥಿಗಳಾದ ಶ್ರೀಮಾನ್ ಬೈತಡ್ಕ ಜೋಯಪ್ಪನವರು ಹಾಗೂ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ನಂಗಾರು ನಾಣಯ್ಯ ನವರು ಮಾತನಾಡಿ ಸಂಘವು ಹಮ್ಮಿಕೊಂಡಿರುವ ವಿವಿಧ ಕಾರ್ಯಕ್ರಮದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ, ಕೆಲವು ಹಿತವಚನ ನೀಡಿ ಪ್ರಶಂಸಿದರು. ಅಲ್ಲದೆ ಸಂಘದ ಸದಸ್ಯತ್ವವನ್ನು ಪಡೆದುಕೊಳ್ಳಲು ಇಚ್ಛೆ ವ್ಯಕ್ತಪಡಿಸಿದರು.

ಸಂಘದ ನೂತನ ಅಧ್ಯಕ್ಷರಾಗಿ ಶ್ರೀ ಮೂಟೇರ ಜಿ. ಉತ್ತಪ್ಪ (ವಕೀಲರು ಮತ್ತು ನೋಟರಿ ಪಬ್ಲಿಕ್)ನವರನ್ನು ಸಭೆಯು ಆಯ್ಕೆ ಮಾಡಿ ಅಭಿನಂದಿಸಿತು. ಶ್ರೀ ಕಲ್ಲುಮುಟ್ಲು ಬಸಪ್ಪ ಮತ್ತು ಶ್ರೀ ಎಂ. ಆರ್. ಜಯಕುಮಾರ್ ಇವರನ್ನು ಕಾರ್ಯಕಾರಿ ಸಮಿತಿಗೆ ಹೆಚ್ಚುವರಿ ಪದಾಧಿಕಾರಿಗಳಾಗಿಯೂ ಮತ್ತು ಶ್ರೀ ವೈ. ವೆಂಕಪ್ಪ ಹಾಗೂ ಶ್ರೀ ಯು. ಬಿ. ಎಸ್. ನಾಗೇಶ್ ಇವರನ್ನು ಲೆಕ್ಕ ಪತ್ರ ಸಲಹೆಗಾರರಾಗಿ ಆಯ್ಕೆ ಮಾಡಿ ಸಭೆಗೆ ಪರಿಚಯಿಸಲಾಯಿತು.

ಕೊನೆಯದಾಗಿ ನೆರೆದ ಸರ್ವರನ್ನು ಶ್ರೀ ವೈ. ವೆಂಕಪ್ಪನವರು ವಂದಿಸಿದರು. ಭೋಜನದ ನಂತರ ಶ್ರೀ ಜೆ. ಎಂ. ಪ್ರಕಾಶ್‌ನವರು ಕೆಲವು ಸ್ಪರ್ಧೆಗಳನ್ನು ಏರ್ಪಡಿಸುವುದರ ಮೂಲಕ ಸಭೆಯನ್ನು ರಂಜಿಸಿದರು.

ವರದಿ : ಉಡುದೋಳಿರ ಎಲ್. ಸೋಮಪ್ಪ,
**ಕಾರ್ಯದರ್ಶಿ, ಗೌಡಬಂಧು ಮಿತ್ರರ ಕ್ಷೇಮಾಭಿವೃದ್ಧಿ ಸಂಘ, ಬೆಂಗಳೂರು.**

---

**ಹಿಂದಿನ ಪುಟದಿಂದ**

ಒಟ್ಟು, ಸದಸ್ಯತನದ ಆಧಾರ ಮೇಲೆ ನಿಗದಿಪಡಿಸಬೇಕೆಂದು ಚರ್ಚೆಗೆ ಬಂದರೂ ಈ ಕೆಳಗಿನಂತೆ ಸದಸ್ಯತನವನ್ನು ನಿಗದಿ ಪಡಿಸಬೇಕೆಂದು ಅಭಿಪ್ರಾಯಿಸಲಾಯಿತು.

ಪ್ರತೀ ಸಮಾಜ/ಸಂಘದ ಅಧ್ಯಕ್ಷರು, ಕಾರ್ಯದರ್ಶಿ ಹಾಗೂ ಒಬ್ಬ ನಿರ್ದೇಶಕರಿಗೆ ಅಂದರೆ 2+1 ಸದಸ್ಯತನ ನೀಡಿ, ಈ ಮಧ್ಯೆ ಕೊಡಗು ಗೌಡ ವಿದ್ಯಾ ಸಂಘದ ಉಪಾಧ್ಯಕ್ಷರಾದ ಶ್ರೀಮಾನ್ ಸೂರ್ತಲೆ ಆರ್. ಸೋಮಣ್ಣ ಇವರು ಮಾತನಾಡಿ ಕೊಡಗು ಗೌಡ ವಿದ್ಯಾ ಸಂಘ ಹಾಗೂ ಕೊಡಗು ಗೌಡ ಸಮಾಜ ಇವುಗಳು ನಮ್ಮ ಜನಾಂಗದ ಎರಡು ಹಿರಿಯ ಸಂಸ್ಥೆಗಳಾಗಿದ್ದು ಇವುಗಳು ಕೊಡಗಿನ ಕೇಂದ್ರಸ್ಥಳ ಮಡಿಕೇರಿಯಲ್ಲಿರುವುದರಿಂದ ಇವುಗಳಿಗೆ ವಿಶೇಷ ಪ್ರಾತಿನಿಧ್ಯ ನೀಡಿ, ಅಧ್ಯಕ್ಷರು, ಕಾರ್ಯದರ್ಶಿ ಹಾಗೂ ಇತರ ಮೂರು ನಿರ್ದೇಶಕರಿಗೆ ಸದಸ್ಯತನದ ಹಕ್ಕನ್ನು ನೀಡುವಂತೆ ವಾದಿಸಿದರು. ಇದಕ್ಕೆ ಅಮ್ಮವನ ವಾಸು, ಕೋರನ ಪೂಣಚ್ಚ, ಹಾಗೂ ಹಲವು ಮಂದಿ ಒಲವು ವ್ಯಕ್ತ ಪಡಿಸಿದರು. ಅಂತಿಮವಾಗಿ ಈ ವ್ಯವಸ್ಥೆ ಮುಂದೆ ತೊಂದರೆಗೆ ಅವಕಾಶವಾಗಬಹುದೆಂದು ಚರ್ಚಿಸಿ ಎಲ್ಲಾ ಸಮಾಜ/ಸಂಘಟನೆಗಳಿಗೆ ಒಂದೇ ತರಹದ ಪ್ರಾತಿನಿಧ್ಯ ಅಂದರೆ 2 + 1 ರಂತೆ ಸದಸ್ಯತನ ನೀಡುವ ಬಗ್ಗೆ ಬೈಲಾದಲ್ಲಿ ಅಳವಡಿಸುವಂತೆ ತೀರ್ಮಾನಿಸಲಾಯಿತು.

ಬೈಲಾದಲ್ಲಿ ಪ್ರತೀ ಸದಸ್ಯ ಸಮಾಜ ನೊಂದಣಿ ಶುಲ್ಕವಾಗಿ ಫೆಡರೇಷನ್‌ಗೆ ರೂ. 3,000/-ವನ್ನು ಪಾವತಿಸುವಂತೆಯೂ ಹಾಗೂ ಪ್ರತೀ ವರ್ಷ ರೂ. 2,000/- ವಾರ್ಷಿಕ ವಂತಿಕೆ ನೀಡುವಂತೆಯೂ ಅಳವಡಿಸಲಾಯಿತು.

ಅಂತಿಮವಾಗಿ ಬೈಲಾವನ್ನು ಬೈಲಾ ಕಮಿಟಿ ಪುನೊಂದಾವರ್ತಿ ಸಂಪೂರ್ಣ ಪರಶೀಲಿಸಿ ಬೈಲಾವನ್ನು ಪೂರ್ಣಗೊಳಿಸಿ ಸೆಪ್ಟಂಬರ್ ಅಂತ್ಯದೊಳಗೆ ಫೆಡರೇಷನ್‌ಅನ್ನು ನೊಂದಣಿಸಿಕೊಳ್ಳುವಂತೆ ಬೈಲಾ ಸಮಿತಿ ಮುಖ್ಯಸ್ಥರಾದ ಶ್ರೀಮಾನ್ ತೆಕ್ಕಡೆ ಎಸ್. ನೇಮಿರಾಜ ಹಾಗೂ ಇತರರಿಗೆ ವಹಿಸಲಾಯಿತು.

ಜನಾಂಗದ ಪ್ರಮುಖರ ಈ ಹೆಜ್ಜೆ ಪೂರ್ಣ ಫಲಪದ್ರವಾಗಿ ಗೌಡ ಜನಾಂಗದ ಅಭಿವೃದ್ಧಿಗೆ ಸಹಕಾರಿಯಾಗಲಿ ಎಂದು ಆತ್ಮಪೂರ್ವಕವಾಗಿ ಹಾರೈಸುತ್ತೇನೆ.

– ಜೈ ಗೌಡ ಬಾಂಧವರೆ

---

ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಅಭಿವೃದ್ಧಿ ಸಂಘ (ರಿ)

# 1998ರ ನವೆಂಬರ್‌ನಲ್ಲಿ ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ, ಮಂಗಳೂರು ಇವರಿಗೆ ಮಂಡಿಸಿದ ಬಿನ್ನವತ್ತಳೆ

ರಿಗೆ,
ಅಧ್ಯಕ್ಷರು, ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ,
ಕ್ಯಾಂಪ್, DC ಆಫೀಸು, ಮಂಗಳೂರು.

ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳ ಅರೆಗನ್ನಡ (ನಡುಗನ್ನಡ) ಅಥವಾ ತುಳು ಮಾತೃಭಾಷೆಯಾಗಿರುವ 'ಹತ್ತು ಕುಟುಂಬ ಹದಿನೆಂಟು ಬಳಿ' (ಗೋತ್ರ) ಎಂಬ ಜಾತಿಯ ಚೌಕಟ್ಟಿನೊಳಗಿರುವ ಕೃಷಿ ಅವಲಂಬಿತ ಗೌಡರಾದ ನಾವು ತಮ್ಮ ಕರುಣಾಮಯ ಪರಿಶೀಲನೆಗಾಗಿಯೂ, ನ್ಯಾಯಬದ್ಧ ಕ್ರಮಕ್ಕಾಗಿಯೂ ಈ ಮನವಿಯನ್ನು ಸಲ್ಲಿಸುತ್ತಿರುವೆವು.

ಗೌಡರಾದ ನಾವು ಭಾರತೀಯರು. ನಾವು ಹಿಂದುಗಳು. ಜಾತಿಯಲ್ಲಿ ಗೌಡರು, ಕಸುಬಿನಲ್ಲಿ ಕೃಷಿ ಕಾರ್ಮಿಕರು ಅಥವಾ ಕೃಷಿ ಅವಲಂಬಿತರು. ಗೌಡರೆನಿಸಿಕೊಳ್ಳುವವರು ಕರ್ನಾಟಕದ ಇತರ ಪ್ರದೇಶಗಳಲ್ಲೂ, ಇತರ ರಾಜ್ಯಗಳಲ್ಲೂ ಇರಬಹುದಾದರೂ ಅವರಿಗೂ ನಮಗೂ ಯಾವುದೇ ರೀತಿಯ ಜಾತಿಯ ಸಂಬಂಧಗಳಿರುವುದಿಲ್ಲ. ತುಳು ಅಥವಾ ಅರೆಗನ್ನಡ ಮಾತೃಭಾಷೆಯಾಗಿರುವ ಗೌಡರಾದ ನಮ್ಮನ್ನು ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಭಾಗದಲ್ಲೂ, ಉತ್ತರ ಕೊಡಗಿನಲ್ಲೂ ಸಾಧಾರಣವಾಗಿ ಕಾಣಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕು ಮತ್ತು ಕೊಡಗಿನ ಮಡಿಕೇರಿ ತಾಲೂಕುಗಳು ತುಳು ಮತ್ತು ಅರೆಗನ್ನಡ ಗೌಡರ ತವರೂರುಗಳು. ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕುಗಳಾದ ಸುಳ್ಯ ತಾಲೂಕು, ಪುತ್ತೂರು ತಾಲೂಕು, ಬಂಟ್ವಾಳ ತಾಲೂಕು ಮತ್ತು ಬೆಳ್ತಂಗಡಿ ತಾಲೂಕುಗಳು ಮತ್ತು ಕೊಡಗು ಜಿಲ್ಲೆಯ ಮಡಿಕೇರಿ ತಾಲೂಕು ಹಾಗೂ ಸೋಮವಾರಪೇಟೆ ತಾಲೂಕುಗಳು ನಮ್ಮ ನೆರೆ ಊರು. ಸುಳ್ಯ ತಾಲೂಕಿಗೆ ನೆರೆ ಊರಾದ ಕೇರಳದ ಬಂದಡ್ಕದಲ್ಲೂ, ಕಲ್ಲಪಳ್ಳಿಗಳಲ್ಲೂ ಗೌಡರು ಸಾಕಷ್ಟು ಸಂಖ್ಯೆಯಲ್ಲಿರುವರು. ಅವರ ಮಾತೃಭಾಷೆ ಕೂಡಾ ಅರೆಗನ್ನಡ ಅಥವಾ ತುಳು. ಗೌಡರಾದ ನಮ್ಮ ಒಟ್ಟು ಜನಸಂಖ್ಯೆ ಅಂದಾಜು ನಾಲ್ಕು ಲಕ್ಷದಷ್ಟಿರಬಹುದು.

'ಹತ್ತು ಕುಟುಂಬ ಹದಿನೆಂಟು ಬಳಿ'ಗೆ ಸೇರಿದ ಗೌಡರಾದ ನಮಗೆ ಉಡುಪಿ ಅಥವಾ ಉತ್ತರ ಕನ್ನಡ ಜಿಲ್ಲೆಗಳಲ್ಲಿರುವ ಹಾಲಕ್ಕಿ ಗೌಡರಾಗಲಿ, ನಾಡವರಾಗಲಿ ಅಥವಾ ಬಯಲುಸೀಮೆಯ ಒಕ್ಕಲಿಗರಾಗಲಿ ಅಥವಾ ಒಕ್ಕಲಿಗ ಗೌಡರಾಗಲಿ ಯಾರೂ ಸಮ ಜಾತಿಯವರಲ್ಲ. ನೆರೆ ರಾಜ್ಯಗಳ ಗೌಂಡರಾಗಲಿ ಅಥವಾ ಗೌಡ ಪದಕ್ಕೆ ಸಮಾನವಾಗಿ ಸ್ವರಾಕ್ಷರಗಳಿಂದ ಒಳಗೊಂಡ ಯಾವ ಕೋಮಿನವರು ಗೌಡರಲ್ಲ ಮತ್ತು ನಮಗೆ ಸಮಾನರಲ್ಲ. ಅವರಿಗೆ ನಾವು ಸಮಾನರಲ್ಲ. ನಾವು ಏನಿದ್ದರೂ ಬೇರೆಯೇ ಗೌಡರು.

ಮೂಲತಃ ಗೌಡರಾದ ನಾವು ಈಗಿನ ದಕ್ಷಿಣ ಕನ್ನಡದ ಮಲೆನಾಡು ಪ್ರದೇಶಗಳಲ್ಲಿ ಬೀಡು ಬಿಟ್ಟು, ಕೃಷಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಾ ಬಂದವರು. ಬಡತನದಿಂದ ಬಳಲಿ ಬೆಂಡಾದ ಹಲವು ಕುಟುಂಬಗಳು ಒಡೆದು ಕೊಡಗಿಗೆ ಹೋಗಿ ಅಲ್ಲಿ ತೋಟದ ಆಳುಗಳಾಗಿ ಮತ್ತು ಕೃಷಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಿರುವವರು. ಅಂತಹ ಕುಟುಂಬದವರು ಇಂದಿಗೂ ತಮ್ಮ ಮೂಲ ಮನೆಗಳಿಗೆ ಬಂದು ದೈವಾರಾಧನೆಗಳಂತ ಕೌಟುಂಬಿಕ ಕಾರ್ಯಕ್ರಮಗಳಲ್ಲಿ ಸಹಭಾಗಿಗಳಾಗಿರುವುದನ್ನು ನಾವಿಂದೂ ಕಾಣಬಹುದು.

**ಭಾರತ ಸರಕಾರ ಮತ್ತು ಕರ್ನಾಟಕ (ಮೈಸೂರು) ಸರಕಾರಗಳು ಹೊರ ತರುತ್ತಿರುವ ಅಧಿಕೃತ ಗೆಜ್ಜೇಟಿಯರ್‌ಗಳಲ್ಲಿ ನಮ್ಮನ್ನು ಅತಿ ವಿರಳವಾಗಿ ಗೌಡರು ಎಂದು (ಗೌಡ, ಗವುಡ) ಸವಿಸ್ತಾರದ ವಿವರಣೆಯನ್ನು ಕೊಟ್ಟಿರುವುದನ್ನು ದಾಖಲೆಯ ರೂಪದಲ್ಲಿ ಕಾಣಬಹುದು. ನಾವು ಈ ಗೆಜ್ಜೇಟಿಯರ್‌ಗಳಲ್ಲಿ ಹೇಳಿದ 'ಹತ್ತು ಕುಟುಂಬ ಹದಿನೆಂಟು ಗೋತ್ರ ಬಳಿ'ಯ ಅರೆಗನ್ನಡ ಅಥವಾ ತುಳು ಮಾತೃಭಾಷೆಯಾಗಿರುವ ಗೌಡರು. ಆದುದರಿಂದ ನಮ್ಮನ್ನು ಇತರರೊಂದಿಗೆ ನೇರವಾಗಿಯಾಗಲಿ, ಉಪಪಂಗಡ ವೆಂದಾಗಲಿ ಗುರುತಿಸುವುದನ್ನು ನಾವು ವಿರೋಧಿಸುತ್ತೇವೆ.** ನಾವು ಹಿಂದುಳಿದ ಜಾತಿಯವರು, ನಾವು ಸಾಮಾಜಿಕವಾಗಿಯೂ, ಆರ್ಥಿಕವಾಗಿಯೂ, ಶೈಕ್ಷಣಿಕವಾಗಿಯೂ ಹಿಂದುಳಿದ ಗೌಡರು. ಗೌಡರಾದ ನಮ್ಮನ್ನು ಗೌಡರೆಂದು ಗುರುತಿಸುವ ಬದಲಾಗಿ ಒಕ್ಕಲಿಗರೆಂದೋ, ಒಕ್ಕಲಿಗ ಗೌಡರೆಂದೋ ಗುರುತಿಸುವುದು ನಿಜವಾದ ಚರಿತ್ರಕಾರರಿಗೂ, ಟಿಪ್ಪಣಿಕಾರರಿಗೂ ಮಾಡುತ್ತಿರುವ ಅವಮಾನ, ಮಾತ್ರವಲ್ಲ ನಮ್ಮ ಗೌಡರನ್ನು ಬೇರು ಸಹಿತ ಕಿತ್ತೊಗೆಯುವ ಪ್ರಯತ್ನ ಇದಾಗಬಹುದೆಂಬುದನ್ನು ಈ ಆಯೋಗವು ನೆನಪಿಟ್ಟರೆ ಮಾತ್ರ ನಮಗೆ ಈ ದಿಶೆಯಲ್ಲಿ ನ್ಯಾಯ ದೊರೆಯಬಹುದಾದ ಸಾಧ್ಯತೆ ಖಂಡಿತ ಇದೆ.

ಯಾವುದೇ ಒಂದು ಜಾತಿಯನ್ನು ಅಥವಾ ಕೋಮಿನವರನ್ನು ಸಾಮಾಜಿಕವಾಗಿ ಇನ್ನೊಂದು ಜಾತಿಯೊಂದಿಗೆ ಅಥವಾ ಕೋಮಿನೊಂದಿಗೆ ಸೇರಿಸಿ ಗುರುತಿಸುವುದರಿಂದ ಯಾವುದಾದರು ಒಂದು ಜಾತಿಯವರಿಗೆ ಅಥವಾ ಕೋಮಿನವರಿಗೆ ಅನ್ಯಾಯವಾಗುವುದು ಸಹಜ. ಸಂವಿಧಾನದ ಸಮಾನತೆಯ ನಿಜವಾದ ಅರ್ಥ ಇಂತಹ ಪ್ರಯತ್ನಗಳಿರಲಾರವು ಎಂಬುದನ್ನು ತಾವು ಮನವರಿಕೆ ಮಾಡಿಕೊಳ್ಳಬೇಕೆಂಬುದು ನಮ್ಮ ವಿಜ್ಞಾಪನೆಯಾಗಿದೆ. ಸರಿಯಾದ ಮಾಹಿತಿಯೊಂದಿಗೆ ಅಂಕೆ-ಅಂಶಗಳ ಆಧಾರದ ಮೇಲೆ ನಮ್ಮನ್ನು ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಗುರುತಿಸಿ ಅವುಗಳ ಆಧಾರದ ಮೇಲೆ ನಮ್ಮನ್ನು ವರ್ಗೀಕರಿಸಿದರೆ ನಾವು ಹಿಂದುಳಿದ ಜಾತಿಯವರೆಂದು ಖಚಿತಗೊಳ್ಳಬಹುದೆಂಬ ನಂಬುಗೆ ನಮ್ಮದು. [illegible] ಸಾಮಾಜಿಕ ಹಿನ್ನೆಲೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ [illegible] ಎಂದಿಗೂ ಮುಂದೆ ಬರುವ ಸಾಧ್ಯತೆಗಳು ಕಂಡುಬರುವುದಿ[illegible]

(ನಿಲ[illegible]

ನಾವು ಶೋಷಣೆಗೆ ಒಳಗಾದಂಥ ಒಂದು ಜಾತಿ. ನಮ್ಮನ್ನು ಬಳಸಿಕೊಳ್ಳದವರೇ ಕಡಿಮೆ ಎನ್ನಬಹುದು. ನಾವು ಬಿಳಿಯಾದುದೆಲ್ಲ ಹಾಲು ಎಂಬ ಹಾದಿಯಲ್ಲಿ ವ್ಯವಹರಿಸುವವರು. ಬಡತನದಲ್ಲೂ ಮಾತುಳಿಸಿಕೊಳ್ಳಲು ಹೋಗಿ ಕಡುಬಡವರಾದ ಜಾತಿ ಎಂದರೆ ಗೌಡರು ಮಾತ್ರ ಎನ್ನಬಹುದು. ಗೌಡರ ಪರಿಸರದಲ್ಲಿರುವ ಮುಂದುವರಿದ ಕೋಮಿನವರು ಗೌಡರಾದ ನಮ್ಮನ್ನು ಬಳಸಿಕೊಂಡ ರೀತಿಗಳನ್ನು ಸಿಂಹಾವನಲೋಕಿಸಿದಾಗ ನಾವು ಇಷ್ಟೊಂದು ಶೋಷಣೆಗೆ ಒಳಗಾಗಬಾರದಿತ್ತು ಎಂದು ಪ್ರಲಾಪಿಸುವಂತಾಗುತ್ತಿದೆ.

ದಕ್ಷಿಣ ಕನ್ನಡ, ಮದ್ರಾಸ್ ರಾಜ್ಯವಾಗಿದ್ದಲ್ಲಿಯ ತನಕವೂ, ಕೊಡಗು 'ಸಿ' ರಾಜ್ಯವಾಗಿರುವ ತನಕವೂ ಗೌಡರಾದ ನಮ್ಮನ್ನು ಹಿಂದುಳಿದ ಜಾತಿಯವರೆಂದು ಪರಿಗಣಿಸಿ ಸರಕಾರದ ಸವಲತ್ತುಗಳಿಗೆ ಗೌಡರು ಅರ್ಹರಾಗಿದ್ದೆವು. ಆದರೆ ಕರ್ನಾಟಕ ಇಂದಿನ ಅಸ್ತಿತ್ವದಲ್ಲಿರುವ ನಿಯಮಾವಳಿಯಂತೆ ನಾವು ಒಕ್ಕಲಿಗರಲ್ಲಿ ಒಂದು ಪಂಗಡವೆಂದು ಗುರುತಿಸಲ್ಪಟ್ಟು ಅವರ ಮಟ್ಟಕ್ಕೆ ಹೋಗುವಂತಿಲ್ಲದೆ ಮತ್ತು ಗೌಡರ ನಿಜ ಸ್ಥಾನಕ್ಕೆ ಹಿಂದಿರುಗಲು ಅವಕಾಶವಿಲ್ಲದೆ ಡೋಲಾಯಮಾನ ಹಂತದಲ್ಲಿ ಸಿಲುಕಿರುವ ನಾವು ಏನಾದರೂ ಗೌಡರೇ. ಹಿಂದೆ ಸಮಾಜ ನಮ್ಮನ್ನು ಶೋಷಣೆಗೆ ಒಳಪಡಿಸಿತ್ತು. ಈಗ ಸರಕಾರ ಶೋಷಣೆಗೆ ನಮ್ಮನ್ನು ಗುರಿಪಡಿಸಿದಂತಾಗಿದೆ. ಇದು ನಮ್ಮ ತ್ರಿಶಂಕು ಪರಿಸ್ಥಿತಿ.

**ರಾಜ್ಯಗಳ ಪುನಃರ್ವಿಂಗಡನೆಗೆ ಹಿಂದೆ ಗೌಡರಾದವರು ಪುನರ್ವಿಂಗಡನೆಯ ಬಳಿಕ ಒಕ್ಕಲಿಗರಾಗುವುದೆಂದರೆ ಇದರಂಥ ವಿಪರ್ಯಾಸ ಬೇರೊಂದಿದೆಯೆ? ಆದರೆ ಇದು ಗೌಡರಿಗೆ ಸರಕಾರದಿಂದ ಆಗುತ್ತಿರುವ ಅನ್ಯಾಯದ ಫಲ ಅಲ್ಲವೇ ?**

ದ. ಕ. ಮತ್ತು ಕೊಡಗಿನ ಗೌಡ ಜನಾಂಗದವರ ಮಹಾ ಸಮ್ಮೇಳನವನ್ನು 1985ರಲ್ಲಿ ಸುಳ್ಯದಲ್ಲಿ ಏರ್ಪಡಿಸಿದ್ದೆವು. ಇದರಲ್ಲಿ ಒಕ್ಕಲಿಗರಾಗಲೀ, ಅದಕ್ಕೆ ಸಮಾನರಾದ ಇನ್ನಾವ ಕೋಮಿನವರಿಗೆ ಭಾಗವಹಿಸಲು ಅವಕಾಶವಿರಲಿಲ್ಲ. ಏಕೆಂದರೆ ಇದು 'ಹತ್ತು ಕುಟುಂಬ ಹದಿನೆಂಟು ಬಳಿ' (ಗೋತ್ರ)ಕ್ಕೆ ಸೇರಿದ ಅರೆಗನ್ನಡ ಅಥವಾ ತುಳು ಮಾತೃಭಾಷೆಯಾಗಿರುವ ಗೌಡರ ಸಮ್ಮೇಳನವಾಗಿತ್ತು ಎಂದರೆ ಗೌಡರು ಒಕ್ಕಲಿಗರಲ್ಲ, ಒಕ್ಕಲಿಗರು ನಮ್ಮ ಗೌಡರಲ್ಲ ಎಂಬುದನ್ನು ಎತ್ತಿ ತೋರಿಸುತ್ತದೆ.

ಈ ಸಮ್ಮೇಳನದ ಅಂಗವಾಗಿ ನಾವು ಗ್ರಾಮ ಗ್ರಾಮಗಳಲ್ಲಿ ಒಂದು ಸಾಮಾಜಿಕ ಸರ್ವೆಯನ್ನು ನಡೆಸಿದೆವು. ಅದು ನಮ್ಮ ನೈಜ ಚಿತ್ರಣವನ್ನು ಎತ್ತಿ ತೋರಿಸುತ್ತದೆ. ಅದರಲ್ಲಿ ನಮ್ಮ ಶೈಕ್ಷಣಿಕ ಮಟ್ಟ, ಆರ್ಥಿಕ ಪರಿಸ್ಥಿತಿ, ಹಿಡುವಳಿಗಳ ವಿವರ ಇವುಗಳನ್ನು ಅಳವಡಿಸಲಾಗಿದ್ದು ಅದೊಂದು ಗೌಡ ಜಾತಿಯನ್ನು ಪ್ರತಿಬಿಂಬಿಸುವ ಕೈಗನ್ನಡಿಯಂತಿದೆ. ಅದರ ಪ್ರಕಾರ ಗೌಡರು ಕೃಷಿ ಕಾರ್ಮಿಕರಿಂದ ಭೂ ಮಾಲೀಕರಾದುದು ಕರ್ನಾಟಕದಲ್ಲಿ ಭೂ ಸುಧಾರಣೆಯ ಬಳಿಕ. ಆದರೆ ಹಿಡುವಳಿಗಳು ಅವರು ಗೇಣಿಗೆ ಮಾಡುತ್ತಿದ್ದ ½ ಎಕ್ರೆಯಿಂದ 2 ಎಕ್ರೆಗಳಿಗೆ ಸೀಮಿತವಾಗಿರುವುದನ್ನು ಇಲ್ಲಿ ಪರಿಗಣಿಸಬೇಕಾದ ಒಂದು ಮುಖ್ಯ ಅಂಶ. ನಮ್ಮ ಮಾಹಿತಿ ಸಂಗ್ರಹದ ಪ್ರಕಾರ ನಮ್ಮಲ್ಲಿ ಶೇ. 75ಕ್ಕಿಂತಲೂ ಹೆಚ್ಚಿನವರು ಪ್ರಾಥಮಿಕ ಶಿಕ್ಷಣದಿಂದಲೂ ವಂಚಿತರಾಗಿ ನಮ್ಮ ಮಹಿಳೆಯರಲ್ಲಿ ಶೇ. 80ಕ್ಕಿಂತಲೂ ಹೆಚ್ಚಿನವರು ಅವಿದ್ಯಾವಂತರು. ನಮ್ಮಲ್ಲಿ ಪದವೀಧರರು ಶೇ. 5ಕ್ಕಿಂತಲೂ ಕೆಳಗಿನ ಸಂಖ್ಯೆಯಲ್ಲಿರುವರು. ಗೌಡರಾದ ನಮ್ಮಲ್ಲಿ ಇದು ತನಕ I.A.S., I.P.S. I.F.S. ಇತ್ಯಾದಿ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ತೇರ್ಗಡೆಯಾದವರಿಲ್ಲ ಎನ್ನಲು ಮುಜುಗರವೆನಿಸುತ್ತದೆ. ಅಂತೆಯೇ ನಮ್ಮ ಶೈಕ್ಷಣಿಕ ಹಿಂದುಳಿಯುವಿಕೆ ಹಾಗೂ ಸಾಮಾಜಿಕ ಹಿನ್ನೆಲೆಗಳು ನಮ್ಮನ್ನು ಹಿಂದುಳಿದ ಜಾತಿಯವರೆಂದು ಪರಿಗಣಿಸಲ್ಪಡುವಲ್ಲಿ ತಮ್ಮನ್ನು ಮನದಟ್ಟಾಗಿಸುವುದೆಂಬುದು ನಮ್ಮ ಭರವಸೆ.

ಈ ಒಂದೆರಡು ದಶಕಗಳಲ್ಲಿ ಸರಕಾರದಿಂದ ಪ್ರೋತ್ಸಾಹ ದೊರಕಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಅಭಿವೃದ್ಧಿಯನ್ನು ಪರಿಗಣಿಸಿದಾಗ, ಗೌಡರಾದ ನಾವು ಅಭಿವೃದ್ಧಿಯಿಂದ ವಂಚಿತರಾಗಿ ಇಂದಿನ ಪ್ರಸ್ತುತ ಹಂತದಲ್ಲಿ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಅವರಿಂದಲೂ ಕೆಳಮಟ್ಟದಲ್ಲಿರುವೆವು ಎಂಬ ಸತ್ಯಾಂಶವನ್ನು ಮುಂದಿಡಲು ದುಃಖವಾಗುತ್ತಿದೆ.

ಇನ್ನೊಂದು ಆಶ್ಚರ್ಯವಾದರೂ ಸತ್ಯವಾದ ವಿಷಯವೆಂದರೆ ನಮ್ಮ ಗೌಡ ವಿದ್ಯಾರ್ಥಿಗಳಿಗೆ ಮತ್ತು ಉದ್ಯೋಗಾಕಾಂಕ್ಷಿಗಳಿಗೆ ಜಾತೀಯ ಸರ್ಟಿಫಿಕೇಟನ್ನು ತಹಶೀಲ್ದಾರರಿಂದ ಪಡೆಯಲು ಹೋದಾಗ ಸರಕಾರದ ಪ್ರಸ್ತುತ ನೀತಿಯ ದೆಸೆಯಿಂದಾಗಿಯೋ ಮತ್ತು ತಹಶೀಲ್ದಾರರ ಮುಂದಿರುವ ಜಾತಿ ವರ್ಗೀಕರಣದ ಯಾದಿಯಿಂದಾಗಿಯೋ ಗೌಡರಾದ ನಮಗೆ ಗೌಡರೆಂದು ಜಾತಿ ಸರ್ಟಿಫಿಕೇಟ್ ತಹಶೀಲ್ದಾರರವರಿಂದ ಸಿಗದೇ ಇರುವಂತಹ ಒಂದು ಸಂದಿಗ್ಧ ಪರಿಸ್ಥಿತಿ. ಒಕ್ಕಲಿಗರ ಗುಂಪಿನಡಿಯಲ್ಲಿ ಗೌಡ/ಗವುಡ (Gowda/Gouda) ಎಂದು ಸೇರಿಸಲ್ಪಟ್ಟ ಯಾದಿಯೇ ತಹಶೀಲ್ದಾರರಲ್ಲಿ ಇರುವುದರಿಂದ "ಒಕ್ಕಲಿಗ ಗೌಡ" ಎಂಬಂತೆ ಜಾತಿಯ ಸರ್ಟಿಫಿಕೇಟ್ ಪಡೆಯಬಹುದಲ್ಲದೆ 'ಗೌಡ' ಎಂದು ಜಾತಿಯ ಸರ್ಟಿಫಿಕೇಟ್ ಪಡೆಯಲಾಗದಿರುವುದು ವಿಷಾದನೀಯ. ಶಾಲೆ ಕಾಲೇಜಿಗೆ ಸೇರುವ ಆತುರದಿಂದ ನಮ್ಮ ಜಾತಿಯ ಅಂದರೆ ಗೌಡ ಜಾತಿಯ ವಿದ್ಯಾರ್ಥಿಗಳು ಮತ್ತು ಸರಕಾರಿ ಉದ್ಯೋಗಗಳಿಗೆ ಸೇರ ಬಯಸುವವರು "ಒಕ್ಕಲಿಗ-ಗೌಡ" ಎಂದು ಸರ್ಟಿಫಿಕೇಟು ತಹಶೀಲ್ದಾರರಿಂದ ಪಡೆಯುವ ಚಿಂತಾಜನಕ ಪರಿಸ್ಥಿತಿ ಉದ್ಭವಿಸಿದೆ. ಹುಟ್ಟಿರುವುದು ಗೌಡ ತಂದೆ-ತಾಯಿಯವರ ಉದರದಲ್ಲಿ ಆದರೆ ತಹಶೀಲ್ದಾರರಿಂದ ಸರ್ಟಿಫಿಕೇಟು ಪಡೆಯುವುದು ಒಕ್ಕಲಿಗ ಗೌಡ ಎಂದು. ಯಾರಿಗೆ ನೋವಾಗದಿರದು? ನಾವು ಈ ಅವಮಾನವನ್ನು ಇನ್ನೆಷ್ಟು ದಿನ ಸಹಿಸಬೇಕೆಂದು ತಮ್ಮನ್ನು ಪ್ರಾರ್ಥಿಸಿಕೊಳ್ಳುತ್ತೇವೆ.

ಆದುದರಿಂದ ನಮ್ಮನ್ನು ಗೌಡರೆಂದು ಪ್ರತ್ಯೇಕವಾಗಿ ಗುರುತಿಸಬೇಕಾಗಿ ಮತ್ತು ನಮಗೆ ಗೌಡರೆಂದೇ ಜಾತಿ ದೃಢಪತ್ರಿಕೆ ದೊರಕುವಂತೆ ವಿಜ್ಞಾಪಿಸುತ್ತೇವೆ.

ಒಟ್ಟಿನಲ್ಲಿ ಹಲವು ವಿಷಯಗಳನ್ನು ತಮ್ಮ ಮುಂದಿಟ್ಟರೂ ಕೆಲವು ಬೇಡಿಕೆಗಳನ್ನು ಮುಖ್ಯ ಸಾರಾಂಶಗಳ ರೂಪದಲ್ಲಿ ಮಾತ್ರ ತಮ್ಮ ನಿಯೋಗದೆದುರು ಇಡುತ್ತಿದ್ದೇವೆ.

1. ನಮ್ಮನ್ನು 'ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ' ಸೇರಿದ ಅರೆಗನ್ನಡ ಅಥವಾ ತುಳು ಮಾತೃಭಾಷೆಯಾಗಿರುವ ಮುಖ್ಯತಃ ದಕ್ಷಿಣ ಕನ್ನಡದ ಮತ್ತು ಕೊಡಗಿನ ಗೌಡರೆಂದು ಭಾರತ ಸರಕಾರದಿಂದ ಮತ್ತು ಕರ್ನಾಟಕ ಸರಕಾರದಿಂದ ಅಧಿಕೃತವಾಗಿ ಹೊರತರುತ್ತಿರುವ ಗಜ್ಜೇಟಿಯರ್‌ಗಳಲ್ಲಿ ಗುರುತಿಸಲ್ಪಟ್ಟ ಗೌಡರೆಂದುಗುರುತಿಸ ಬೇಕೆಂದು ವಿಜ್ಞಾಪನೆ. (ಪ್ರತಿ ಲಗತ್ತಿಕರಿಸಿದೆ 'A')

2. ಗಜ್ಜೇಟಿಯರ್‌ಗಳಲ್ಲಿ ಗುರುತಿಸಿದಂತೆ ಗುರುತಿಸಿದ ಬಳಿಕ, ಗೌಡರಾದ ನಮ್ಮ ಶೈಕ್ಷಣಿಕ, ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಗಳನ್ನು ನೈಜ ನೆಲೆಯಿಂದ ಪರಿಗಣಿಸಿ ನಮ್ಮ ವಿಜ್ಞಾಪನೆಯಂತೆ ನಮ್ಮನ್ನು ಗೌಡರು/ಹಿಂದುಳಿದ ಜಾತಿಯವರು ಎಂದು ಪ್ರತ್ಯೇಕವಾಗಿ ವಿಂಗಡಿಸಬೇಕೆಂದು ವಿಜ್ಞಾಪನೆ.

3. ಗೌಡರಾದ ನಾವು ಕನ್ನಡಿಗರು, ಆದುದರಿಂದ ನಮ್ಮನ್ನು "ಗೌಡ"ರೆಂದು ಕನ್ನಡದಲ್ಲೇ ಗುರುತಿಸಬೇಕು. ಕನ್ನಡದಿಂದ ಇಂಗ್ಲೀಷಿಗೆ ತರ್ಜುಮೆಗೊಂಡಾಗ ಗೌಡ ಅಥವಾ ಗವುಡ ಎಂಬ ಅಕ್ಷರ ಲೋಪದೋಷಗಳನ್ನು ಭಾಷಾ ನೆಲೆಯಿಂದ ಚರ್ಚಿಸಿ ಗೌಡರಾದ ನಮ್ಮನ್ನು ಗವುಡ, ಗಲುಡ, ಗಲುಂಡ, ಗೌಂಡರ್ ಎಂಬಿತ್ಯಾದಿ ವ್ಯಾಕರಣಕ್ಕೆ ತುತ್ತಾಗಿ ನಮ್ಮ ನಿಜ ಜಾತಿಯ ಗೌಡ ಪದಕ್ಕೆ ಧಕ್ಕೆ ತರಬಾರದಾಗಿ ವಿಜ್ಞಾಪನೆ.

4. ನಾವು ಹುಟ್ಟಿನಲ್ಲಿ ಗೌಡರು. ನಮಗೆ ಜಾತಿಯ ಸರ್ಟಿಫಿಕೇಟ್‌ಗಳನ್ನು ತಹಶೀಲ್ದಾರ್‌ರವರಿಂದ "ಗೌಡ" (Gowda) ಎಂದೇ ಕೊಡಿಸುವಂತೆ ಆದೇಶ ನೀಡಬೇಕಾಗಿ ವಿಜ್ಞಾಪನೆ.

5. ಬಳಿ (ಗೋತ್ರ)ಗಳು ಸಾಧಾರಣವಾಗಿ ಸಮಾಜದಲ್ಲಿ ಮುಂದುವರಿದ ಬ್ರಾಹ್ಮಣರಲ್ಲಿ ಮಾತ್ರ ಇರುವುದರಿಂದ 'ಬಳಿ' ಇರುವ ಗೌಡರು ಮುಂದುವರಿದ ಕೋಮಿನವರೆಂದು ಪರಿಗಣಿಸಬಾರದಾಗಿ ವಿಜ್ಞಾಪನೆ. ಏಕೆಂದರೆ ದಕ್ಷಿಣ ಕನ್ನಡದಲ್ಲಿ ರಕ್ತ ಸಂಬಂಧ ಎಂದರೆ ಸಗೋತ್ರ ಮದುವೆಯನ್ನು ತಪ್ಪಿಸುವ ದೃಷ್ಟಿಯಿಂದ ದಕ್ಷಿಣ ಕನ್ನಡದ ಹಿಂದುಗಳಲ್ಲಿ ಹೆಚ್ಚಿನ ಕೋಮಿನವರಿಗೂ 'ಬಳಿ' (ಗೋತ್ರ)ಗಳಿವೆ. ಹರಿಜನರಲ್ಲೂ ಮತ್ತು ಗಿರಿಜನರಲ್ಲೂ ಬಳಿಗಳಿವೆ.

6. ಒಕ್ಕಲಿಗರು ಗೌಡರಲ್ಲ ಎಂಬುದಕ್ಕೂ ಮೇಲೆ ಹೇಳಿದ ಗಜ್ಜೇಟಿಯರ್‌ಗಳಲ್ಲಿ ಒಕ್ಕಲಿಗರು ಎಂದು ಪ್ರತ್ಯೇಕವಾಗಿ ಗುರುತಿಸುವುದನ್ನು ತಮ್ಮ ಆಯೋಗ ಪರಿಗಣಿಸಬೇಕಾಗಿ ವಿಜ್ಞಾಪನೆ.

ಸ್ಥಳ : ಮಂಗಳೂರು — ಇತಿ ತಮ್ಮ ವಿಶ್ವಾಸಿಗಳು

ದಿನಾಂಕ : 10-11-1998

---

## ಮದ್ಯಪಾನ

ನಮ್ಮ ಸಮಾಜಕ್ಕೆ ಅಂಟಿರುವ ಶಾಪಗಳಲ್ಲಿ ಮದ್ಯಪಾನವು ಒಂದು. ಮನುಷ್ಯ ರಾಕ್ಷಸನಾಗಬಾರದು. ಮಹಾ ದುಷ್ಟ ಶಕ್ತಿಯ ಚಟವಾದ ಮದ್ಯವು ತನ್ನ ಕರಾಳ ರೂಪವನ್ನು ಸಮಾಜದ ಮೇಲೆ ಬೀರಿದೆ. ಕೇವಲ ಮೋಜಿನ ಪಾನೀಯವಾದ ಮಧ್ಯವು ಮಾನವನ ದೈಹಿಕ ಹಾಗೂ ಮಾನಸಿಕ ಪರಿಸ್ಥಿತಿಯ ಮೇಲೆ ಉಗ್ರ ಪರಿಣಾಮವನ್ನು ಬೀರಿ ಅವನನ್ನು ಸಮಾಜದ ದ್ರೋಹಿಯನ್ನಾಗಿ ಮಾಡುತ್ತದೆ. ಮಧ್ಯಕ್ಕೆ ಮರುಳಾದ ವ್ಯಕ್ತಿ ತನ್ನ ಹಾಗು ಕುಟುಂಬದ ಅವನತಿಗೆ ಕಾರಣನಾಗುತ್ತಾನೆ. ಸಮಾಜದ ನೆಮ್ಮದಿ ಹಾಳುಗೆಡುವುತ್ತಾನೆ. ಜೊತೆಗೆ ತನ್ನ ಆರೋಗ್ಯ ಕೆಡಿಸಿಕೊಂಡು ಕುಟುಂಬದ ಸುಖ ಶಾಂತಿಯನ್ನು ಹಾಳು ಮಾಡುತ್ತಾನೆ. ಕೆಳ ವರ್ಗದ ಜನರಲ್ಲಂತೂ, ಈ ಚಟಕ್ಕೆ ಬಲಿಯಾದವನು ನಿತ್ಯ ಹೆಂಡತಿ ಮಕ್ಕಳಿಗೆ ಚಿತ್ರ ಹಿಂಸೆ ನೀಡಿ ಮನೆಯನ್ನು ನರಕ ಮಾಡಿಬಿಡುತ್ತಾನೆ. ಮಧ್ಯಪಾನಕ್ಕೂ ಸಾಮಾಜಿಕ ಅಪರಾಧಕ್ಕೂ ನೇರ ಸಂಬಂಧ ಇದೆ. ಅಸಡ್ಡೆ ತಿರಸ್ಕಾರಕ್ಕೆ ಒಳಗಾದ ಕುಡುಕ ನಂತರ ಕಂಟಕಪ್ರಾಯನಾಗುತ್ತಾನೆ. ಮಧ್ಯಪಾನದ ಭೀಕರದ ದುಷ್ಟ ಶಕ್ತಿಯನ್ನು ಸಮಾಜದಿಂದ ಬುಡ ಸಹಿತ ಕಿತ್ತೊಗೆಯಬೇಕೆಂದು ಮಹಾತ್ಮಗಾಂಧೀಜಿ ಈ ಮಾತನ್ನು ಹೇಳಿದ್ದರು. ನನ್ನನ್ನು ಅಖಂಡ ಭಾರತದ ಸರ್ವಾಧಿಕಾರಿಯಾಗಿ ಒಂದು ಗಂಟೆಯ ಮಟ್ಟಿಗಾದರು ನೇಮಕ ಮಾಡಿದರೆ, ಆಗ ನಾನು ಮಾಡುವ ಮೊಟ್ಟ ಮೊದಲನೆಯ ಕೆಲಸ ಎಂದರೆ ಯಾವ ಪರಿಹಾರ ಕೊಡದೆ ಹೆಂಡದಂಗಡಿಯನ್ನು ಮುಚ್ಚಿಸಿ ಬಿಡುತ್ತಿದ್ದೆ ಎಂದಿದ್ದರು. ಮಾರಿಯಂತಿರುವ ಮಧ್ಯಪಾನದಿಂದ ಆಗುವ ಅನಾಹುತಕ್ಕೆ ಅಪಾಯಕರ ಅಪಘಾತಕ್ಕೆ ಮಧ್ಯಪಾನವೆ ಮುಖ್ಯ ಕಾರಣ. ಸರ್ಕಾರವೆ ಕಲಿಯಿರಿ ಕಲಿಸಿರಿ ಎಂದರೆ, ಮತ್ತೊಂದು ಕಡೆ ಕುಡಿಯಿರಿ ಕುಡಿಸಿರಿ ಎಂಬ ಇಮ್ಮಡಿ ನೀತಿ, ಮಧ್ಯಪಾನ ನಿಯಂತ್ರಣಕ್ಕೆ ಅಡ್ಡಿಯಾಗಿದೆ ಎಂದರೆ ವಿಧಿಯಿಲ್ಲ. ಜನ ಜಾಗೃತಿಯೇ ಇದಕ್ಕಿರುವ ಸೂಕ್ತ ಪರಿಹಾರ. ಈಗ ಸ್ತ್ರೀಶಕ್ತಿ ಸ್ವಸಹಾಯದಂತಹ ಸಂಘಟನೆಯ ಸ್ತ್ರೀಯರು ಹಲವು ಕಡೆಗಳಲ್ಲಿ ಮಧ್ಯದಂಗಡಿಗಳನ್ನು ಮುಚ್ಚಿಸಲು ಪ್ರಯತ್ನಿಸಿದ್ದಾರೆ. ಅದೆಷ್ಟು ಫಲಕಾರಿಯಾಗುವುದೆಂದು ಕಾದು ನೋಡೋಣಾ ಅಲ್ಲವೇ?

ಬೈತಡ್ಕ ದೇವಮ್ಮ ಮೊಣಪ್ಪ, ನಿರ್ದೇಶಕಿ
ಕೊ. ಗೌ. ಮ. ಒಕ್ಕೂಟ, ಮಡಿಕೇರಿ

---

## ಶ್ರೀಮತಿ ಇಂದಿರಾ ಗಾಂಧಿ

ಶ್ರೀ = ಶ್ರೀಮಂತ ಕುಟುಂಬದಲ್ಲಿ
ಮ = ಮಮತೆಯ ಮಗಳಾಗಿ
ತಿ = ತಿದ್ದಿದ ತಿಲಕದಂತೆ
ಇಂ = ಇಂಡಿಯಾ ದೇಶದ
ದಿ = ದಿಕ್ಕು ದಿಗಂತದಲ್ಲಿ
ರಾ = ರಾರಾಜಿಸುತ್ತಿರುವ
ಗಾಂ = ಗಾಂಧಿ ಛಾಯೆಯುಳ್ಳ
ಧಿ = ಧೀರ ರಮಣಿ.

ಸಂಗ್ರಹ : ಮಣಿಂಡ್ರ ವಾಣಿ ಗೋಪಾಲ್, ಯವಕ...

---

ಮಳೆಯ ನೀರು ಹೋಗಲು ದಕ್ಷಿಣಕ್ಕೆ – ವನಿತೆಯರಿಗೆ ಅನಾರೋಗ್ಯ ತಕ್ಷಣ

# ವಾಸ್ತು ಶಾಸ್ತ್ರದ ವಾಸ್ತವಗಳು




1) ಬಾವಿ, ಬೋರಿಂಗ್, ನೀರು ಶೇಖರಿಸುವ ಹಳ್ಳ, ಪೂಜಾಗೃಹ, ಗೇಟು, ಬಾಗಿಲು, ಭೂಗೃಹ, ವರಾಂಡಾ, ಲಿವಿಂಗ್, ಡ್ರಾಯಿಂಗ್, ಪೋರ್ಟಿಕೋ.

2) ಬಾವಿ, ಬೋರಿಂಗ್, ನೀರು ಶೇಖರಿರುವ ಹಳ್ಳ, ಪೂಜಾ ಗೃಹ, ಸೆಪ್ಟಿಕ್ ಟ್ಯಾಂಕ್, ಗೋಬರ್ ಗ್ಯಾಸ್, ಭೂಗೃಹ (ಸೆಲ್ಲಾರ್) ತುಳಸಿ, ಹೂವಿನ ಗಿಡಗಳು.

3) ಸೆಪ್ಟಿಕ್ ಟ್ಯಾಂಕ್, ಗೋಬರ್ ಗ್ಯಾಸ್, ಡೈನಿಂಗ್, ಸ್ಟೋರ್, ಪೂಜಾ ಗೃಹ, ತುಳಸಿ, ಸಂಣಗಿಡಗಳು

4) ಅಡುಗೆ ಮನೆ, ಬಾಯಿಲರ್ಸ್, ಮೆಟ್ಟಲು, ಲೆಟ್ರಿನ್, ಬಾತ್‌ರೂಂ, ಗಿಡಗಳು ಉಪಗೃಹ

5) ಅಡುಗೆಮನೆ, ಬಾಗಿಲು, ಗೇಟು, ಡ್ರಾಯಿಂಗ್, ಲಿವಿಂಗ್, ಆಫೀಸ್ ರೂಂ, ಟಾಯಿಲೆಟ್ಸ್, ಪೋರ್ಟಿಕೋ, ಗಿಡಗಳು, ಮರಗಳು, ಉಪಗೃಹ, ಭೂಮಿ ಮೇಲೆ ವಾಟರ್ ಟ್ಯಾಂಕ್.

6) ಬಾಗಿಲು, ಗೇಟು, ಮಲಗುವ ಮನೆ, ಡೈನಿಂಗ್, ಡ್ರಾಯಿಂಗ್, ಸ್ಟೋರ್, ಮೆಟ್ಟಿಲುಗಳು, ಟಾಯಿಲೆಟ್ಸ್, ಗಿಡಮರಗಳು, ಉಪಗೃಹ

7) ಮಲಗುವ ಮನೆ, ಟಾಯಿಲೆಟ್ಸ್, ಸ್ಟೋರ್, ಮೆಟ್ಟಲು, ಧಾನ್ಯದ ಕೋಣೆ, ಮರಗಳು

8) ಮಲಗುವ ಮನೆ, ಸ್ಟೋರ್, ಗೋಡೌನ್, ಆಫೀಸ್ ರೂಂ, ಮೆಟ್ಟಲುಗಳು, ಓವರ್‌ಹೆಡ್ ಟ್ಯಾಂಕ್, ಉಪಗೃಹ, ದೊಡ್ಡ ಮರಗಳು, ಭೂಮಿ ಮೇಲೆ ವಾಟರ್ ಟ್ಯಾಂಕ್

9) ಮಲಗುವ ಕೋಣೆ, ಸ್ಟೋರ್, ಆಫೀಸ್ ರೂಂ, ಮೆಷಿನರಿ, ಗೋಡೌನ್, ಓವರ್‌ಹೆಡ್ ಟ್ಯಾಂಕ್, ಮೆಟ್ಟಲು, ಉಪಗೃಹ, ದೊಡ್ಡ ಮರಗಳು.

10) ಮಲಗುವ ಕೋಣೆ, ಸ್ಟೋರ್, ಟಾಯಿಲೆಟ್, ಮೆಟ್ಟಲುಗಳು, ಮರಗಳು.

11) ಬಾಗಿಲು, ಗೇಟು, ಡ್ರಾಯಿಂಗ್, ಡೈನಿಂಗ್, ಲಿವಿಂಗ್, ಟಾಯಿಲೆಟ್ಸ್, ಮೆಟ್ಟಲು ಮರಗಳು, ಉಪಗೃಹ, ಮಲಗುವ ಕೋಣೆ.

12) ಬಾಗಿಲು ಗೇಟು, ಡ್ರಾಯಿಂಗ್, ಲಿವಿಂಗ್, ಟಾಯಿಲೆಟ್ಸ್, ಮಲಗುವ ಮನೆ ಕೊಟ್ಟಿಗೆ, ಧಾನ್ಯದ ಕೋಣೆ, ಅಡುಗೆಯ ಮನೆ, ಪೋರ್ಟಿಕೋ, ಭೂಮಿ ಮೇಲೆ ವಾಟರ್ ಟ್ಯಾಂಕ್.

13) ಅಡುಗೆಮನೆ, ಲಿವಿಂಗ್, ಟಾಯಿಲೆಟ್ಸ್, ಮಲಗುವ ಮನೆ, ಮೆಟ್ಟಲು, ಗಿಡಗಳು.

14) ಮಕ್ಕಳು ಮಲಗುವ ಮನೆ, ಡೈನಿಂಗ್, ಲಿವಿಂಗ್, ಸ್ಟಡಿ ರೂಂ, ಟಾಯಿಲೆಟ್ಸ್, ಸೆಪ್ಟಿಕ್ ಟ್ಯಾಂಕ್, ಗೋಬರ್ ಗ್ಯಾಸ್, ಗಿಡಗಳು, ಭೂಮಿ ಮೇಲೆ ವಾಟರ್ ಟ್ಯಾಂಕ್.

15) ಬಾಗಿಲು, ಗೇಟು, ಸೆಪ್ಟಿಕ್ ಟ್ಯಾಂಕ್, ಸಂಪ್, ಡ್ರಾಯಿಂಗ್, ಲಿವಿಂಗ್, ಪೂಜಾ ಗೃಹ, ಸೆಲ್ಲಾರ್, ತುಳಸಿ ಗಿಡಗಳು

16) ಬಾಗಿಲು, ಗೇಟು, ಬಾವಿ ಬೋರಿಂಗ್, ಸಂಪ್, ವರಾಂಡ, ಪೂಜಾ ಗೃಹ, ಲಿವಿಂಗ್, ಡ್ರಾಯಿಂಗ್, ಪೋರ್ಟಿಕೊ, ಸೆಲ್ಲಾರ್.

(ದೇಹದ ವಕ್ರತೆಗೆ ಶಸ್ತ್ರ ಚಿಕಿತ್ಸೆ-ಗೇಹದ ವಕ್ರತೆಗೆ ವಾಸ್ತು ಚಿಕಿತ್ಸೆ)

---

## ನಗೆ ಮಾತ್

ಗಂಡ : ನನ್ನ ಸರ್ಟ್‌ದ್ ಕೊಂಡಿ ಹಾಕ್‌ಂತ ಹೇಳ್ದೆ. ಆತ್‌ನೆ ತಂಬಾ ಇತ್ತ್. ಗೊತ್ತಾತ್ ಆಫೀಸಿಗೆ ಹೋಕೆ.

ಹೆಂಣ್ : ಎರ್ಡ್ ನಿಮಿಸ ಇರಿ.

ಗಂಡ : ಯಾಕೆ ಎರ್ಡ್ ನಿಮಿಸಲಿ ಕೊಂಡಿ ಹಾಕಿ ಕೊಟ್ಟಿಯ?

ಹೆಂಣ್ : ಇಲ್ಲೆ, ಬ್ಲೌಸ್‌ದ್ ಹುಕ್ಸ್ ಕೂಡ ಮುರ್ಡ್ ಹೋಗುಟ್ಟು. ಅದನ್ನಸ ತಂದ್ ಕೊಟ್ಟನೆ.

ಕೊಟ್ಟಕೇರಿಯನ ಉಷ, ಬಲಂಬೇರಿ

---

ಮನೆಯಲ್ಲಿನ ನೀರು ದಕ್ಷಿಣ ನೈರುತ್ಯದಿಂದ ಹೋಗುವುದು – ಹೆಂಗಳೆಯರ ಆರೋಗ್ಯಕ್ಕೆ ಸಲ್ಲದು

# ಜನಗಣತಿ : ಅಂಕಿ ಅಂಶಗಳು

ಲೇ : ಪ್ರೊ॥ ಪೂಜಾರಿ ಮೊಣ್ಣಪ್ಪ, ಬೆಂಗಳೂರು

ಈ ಲೇಖನವನ್ನು ನಮ್ಮ ಜನಾಂಗದ ಜನರ ಆರ್ಥಿಕ, ಸಾಮಾಜಿಕ ವಿದ್ಯಾಭ್ಯಾಸ ಹಾಗೂ ಉದ್ಯೋಗಗಳ ಅಂಕಿ ಅಂಶಗಳನ್ನು ಕಂಡುಹಿಡಿಯುವ ವಿಷಯದಲ್ಲಿ ಗೌಡರ ಸಂಘ ಸಂಸ್ಥೆಗಳು ಒಟ್ಟುಗೂಡಿ ತಯಾರಿಸಬೇಕಾದ ಪಟ್ಟಿ. ಭಾರತದ ಸರ್ಕಾರ ಹಾಗೂ ಕರ್ನಾಟಕ ಸರ್ಕಾರ ಭಾರತ ಸಂವಿಧಾನ 15(4) ಮತ್ತು 16(4) ವಿಧಿಗಳ ಅನ್ವಯ ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಗಳಿಗೆ ವಿದ್ಯಾರ್ಥಿ ವೇತನ, ತಾಂತ್ರಿಕ ಶಿಕ್ಷಣಗಳಿಗೆ ಸ್ಥಾನಗಳನ್ನು ಭರ್ತಿ ಮಾಡುವಾಗ ಮೀಸಲಾತಿ ಹಾಗೂ ಸರ್ಕಾರ ಉದ್ಯೋಗಗಳಿಗೆ ಮೀಸಲಾತಿ ವಿಷಯದಲ್ಲಿ ಸರ್ಕಾರಗಳು ಕಾಲಕಾಲಕ್ಕೆ ಪಟ್ಟಿಯನ್ನು ಬದಲಾಯಿಸುತ್ತಾ ಹೋಗುತ್ತದೆ.

ಈಗ ಈ ವಿಷಯದಲ್ಲಿ ಸರ್ಕಾರಗಳಿಗೆ ಸಲಹೆ ಕೊಡಲು ಕೇಂದ್ರದಲ್ಲಿ ಖಾಯಂ ಹಿಂದುಳಿದ ಆಯೋಗವನ್ನು ರಾಜ್ಯದಲ್ಲಿ ಖಾಯಂ ಹಿಂದುಳಿದ ಆಯೋಗವನ್ನು ರಚಿಸಲಾಗಿದೆ. ಈ ಆಯೋಗಗಳು ಸರ್ಕಾರಗಳು ಸೂಚಿಸಿದಾಗ ಹಿಂದುಳಿದ ಜಾತಿಗಳಲ್ಲಿ ಯಾ ಪಂಗಡಗಳ ಪಟ್ಟಿಯನ್ನು ತಯಾರಿಸುವ ಕೆಲಸವನ್ನು ಪ್ರಾರಂಭಿಸುತ್ತವೆ. ಹೇಗಿದ್ದರೂ 10 ವರ್ಷಕ್ಕೊಂದಾವರ್ತಿ ಯಾದರು ಪಟ್ಟಿಗಳನ್ನು ಪರಿಷ್ಕರಿಸುತ್ತಾರೆ. ಕೆಲವು ಈಗಿರುವ ಸ್ಥಿತಿಗಿಂತ ತಮ್ಮ ಆರ್ಥಿಕ, ಸಾಮಾಜಿಕ-ವಿದ್ಯಾಭ್ಯಾಸ ಹಾಗೂ ಉದ್ಯೋಗದಲ್ಲಿ ಪ್ರಗತಿಯನ್ನು ಸಾಧಿಸಿದ್ದರೆ ಅಂತಹ ಜಾತಿಗಳ ಯಾ ಪಂಗಡಗಳನ್ನು ಹಿಂದುಳಿದ ವರ್ಗಗಳ ಪಟ್ಟಿಯಿಂದ ತೆಗೆದು ಹಾಕಬಹುದು.

ಕೇಂದ್ರ ಹಾಗೂ ರಾಜ್ಯಗಳ ಅಯೋಗಗಳು ಒಂದು ಜಾತಿ ಯಾ ಪಂಗಡಗಳು ಹಿಂದುಳಿದಿವೆಯೇ ಯಾ ಇಲ್ಲವೋ ಎಂಬುದನ್ನು ಕಂಡುಹಿಡಿಯಲು ಕೆಲವು ಪ್ರಶ್ನಾವಳಿಗಳನ್ನು ಕೊಡುತ್ತಾರೆ. ಅಂತಹ ಪ್ರಶ್ನಾವಳಿಗಳಿಗೆ ಸಂಬಂಧಪಟ್ಟ ವ್ಯಕ್ತಿ ಯಾ ಸಂಸ್ಥೆ ಉತ್ತರ ಕೊಡಬೇಕಾಗಿದೆ.

ಈಗ್ಗೆ ಸುಮಾರು 1992ರಿಂದೀಚೆಗೆ ಕರ್ನಾಟಕದಲ್ಲಿ, ಹಾವನೂರು ಆಯೋಗ, ವೆಂಕಟಸ್ವಾಮಿ ಆಯೋಗಗಳ ಮುಂದೆ ಹಾಜರಾದಾಗ ನಮ್ಮ ಸಂಘ ಸಂಸ್ಥೆಗಳು ಸರಿಯಾದ ಅಂಕಿ ಅಂಶಗಳನ್ನು ಸಂಗ್ರಹಿಸದೆ ತಮ್ಮ ಅಹವಾಲನ್ನು ಈ ಆಯೋಗಗಳ ಮುಂದೆ ಮಂಡಿಸಲಿಲ್ಲ.

ನಂತರ ಈಗ ನಾಲ್ಕೈದು ವರ್ಷಗಳ ಹಿಂದೆ ಕೇಂದ್ರದಲ್ಲಿ ಖಾಯಂ ಆಯೋಗ ಸ್ಥಾಪನೆಯಾದ ನಂತರ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಹಾಗೂ ಕೊಡಗು ಗೌಡ ಸಮಾಜದ ಜಂಟಿ ನಿಯೋಗದಲ್ಲಿ ಅವಸರವಸರದಲ್ಲಿ ಕೆಲವು ಅಂಕಿ-ಅಂಶಗಳನ್ನು ಕೊಡಲಾಯಿತು. ನಂತರ ಎರಡು ವರ್ಷಗಳ ಹಿಂದೆ ನ್ಯಾಯ ಮೂರ್ತಿ ಶ್ಯಾಮಪ್ರಸಾದ್‌ರವರ ಮುಂದೆ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ ಬೆಂಗಳೂರು ಕೊಡಗು ವಿದ್ಯಾ ಸಂಘ ಮಡಿಕೇರಿ, ದಕ್ಷಿಣ ಕನ್ನಡ ಮತ್ತು ಕೊಡಗು ಗೌಡ ಅಭಿವೃದ್ಧಿ ಸಂಘ ಮತ್ತು ಮಂಗಳೂರಿನ ಗೌಡರ ಯಾನೆ ಒಕ್ಕಲಿಗರ ಸಂಘದವರೊಂದಿಗೆ ಸೇರಿ ಕೊಡಲಾಗಿತ್ತು.

ಅದೇ ರೀತಿ 2001ನೇ ಇಸವಿಯಲ್ಲಿ ಕರ್ನಾಟಕ ಹಿಂದುಳಿದ ಆಯೋಗಕ್ಕೆ ಬೆಂಗಳೂರು, ಮಡಿಕೇರಿ, ಮಂಗಳೂರಿನಲ್ಲಿ ಆಯೋಗ ತನಿಖೆಯನ್ನು ಏರ್ಪಡಿಸಿದಾಗಲೂ ಸಹ ಅಂಕಿ ಅಂಶಗಳನ್ನು ಕೊಡಲಾಗಿತ್ತು.

19-12-2000ರಲ್ಲಿ ನಡೆಸಿದ ಕೇಂದ್ರದ ಹಿಂದುಳಿದ ವರ್ಗಗಳ ಮುಂದೆ ದ. ಕ. ಮತ್ತು ಕೊಡಗು ಗೌಡ ಅಭಿವೃದ್ಧಿ ಸಂಘ, ಕೊಡಗು ಮತ್ತು ದ. ಕ. ಗೌಡ ಸಮಾಜ ಬೆಂಗಳೂರು ಮತ್ತು ಗೌಡ ಯಾನೆ ಒಕ್ಕಲಿಗರ ಸಮಾಜ ಮಂಗಳೂರಿನಿಂದ ಅಂಕಿ ಅಂಶಗಳನ್ನು ಸಲ್ಲಿಸಲಾಗಿದ್ದರೂ ಎಲ್ಲಾ ಅಂಕಿ ಅಂಶಗಳು ಆಯಾಯ ಸ್ಥಳದಲ್ಲಿ ಕುಳಿತು ಅಂದಾಜಿನ ಅಂಕಿ ಸಂಖ್ಯೆಗಳನ್ನು ಕೊಡಲಾಯಿತೇ ಹೊರತು ಪ್ರತೀ ಗ್ರಾಮಗಳಿಂದ ಅಂಕಿ ಅಂಶಗಳನ್ನು ಸಂಗ್ರಹಿಸಿ ತಯಾರಿಸಿದ ಪಟ್ಟಿಯಲ್ಲವಾದ್ದರಿಂದ ವಾಸ್ತವ ಅಂಕಿ ಅಂಶಗಳಿಗೂ ಈ ಸಂಘ ಸಂಸ್ಥೆಗಳು ಕೊಟ್ಟ ಅಂಕಿ ಅಂಶಗಳಿಗೂ ವ್ಯತ್ಯಾಸ ಇರುತ್ತದೆ.

ಒಂದು ವೇಳೆ ಕೇಂದ್ರದ ಆಯೋಗವಾಗಲೀ ರಾಜ್ಯದ ಆಯೋಗವಾಗಲೀ ಸ್ಥಳಗಳಿಗೆ ಭೇಟಿ ಮಾಡಿ ಇವುಗಳ ಸತ್ಯವನ್ನು ಪರಿಶೀಲಿಸಿದರೆ ಮೇಲೆ ಕಾಣಿಸಿದ ಸಂಘ ಸಂಸ್ಥೆಗಳು ಕೊಟ್ಟ ಅಂಕಿ ಅಂಶಗಳಿಗೆ ವ್ಯತ್ಯಾಸ ಕಾಣಬಹುದು. ಈ ರೀತಿ ವ್ಯತ್ಯಾಸ ಬಂದರೆ ನಾವುಗಳು ಕೊಡುವ ಮಾಹಿತಿಗೆ ಬೆಲೆಯೇ ಇಲ್ಲವಾಗುತ್ತದೆ. ದಿನದಿಂದ ದಿನಕ್ಕೆ ಜನರಲ್ಲಿ ಪ್ರಗತಿ ಕಾಣುವ ಸಮಯದಲ್ಲಿ ಸರ್ಕಾರವಾಗಲೀ ಅಥವಾ ಹಿಂದುಳಿದ ವರ್ಗಗಳ ಆಯೋಗಗಳಾಗಲೀ ಈ ಅಂಕಿ ಅಂಶಗಳ ಸತ್ಯತೆಯನ್ನು ಬಹಳ ನಿಗವಿಟ್ಟು ಕಂಡು ಹಿಡಿಯುವ ಪ್ರಯತ್ನ ಪಡಬಹುದು. ಆ ಸಂದರ್ಭದಲ್ಲಿ ನಮ್ಮ ಜನಾಂಗದ ವಾಸ್ತವವಾದ ಅಂಕಿ ಅಂಶಗಳ ಪಟ್ಟಿ ತಯಾರಾಗಿ ಇರಬೇಕಾಗುತ್ತದೆ. ಈ ರೀತಿ ಸಂಗ್ರಹಿಸಿದ ಅಂಕಿ ಅಂಶಗಳನ್ನು ಬೇರೆ ಜಾತಿಯವರ ಅಂಕಿ ಅಂಶಗಳೊಡನೆ ಹೋಲಿಸಿ ನಮ್ಮ ಜಾತಿಯ ಜನರು ಬೇರೆಯವರಿಗಿಂತ ಶೇಕಡಾ ಎಷ್ಟು ಹಿಂದೆ ಇದ್ದಾರೆ ಎಂಬ ಸಂಗತಿಯನ್ನು ಕೇಂದ್ರ ಹಾಗೂ ರಾಜ್ಯದ ಆಯೋಗಗಳಿಗೆ ಮನದಟ್ಟಾಗುವಂತೆ ಮಾಡಬೇಕು. ಈ ಆಧಾರ ಗಳನ್ನು ಸಂಗ್ರಹಿಸದೇ ಗೌಡರು ಹಿಂದುಳಿದವರು ಎಂಬುದಾಗಿ ಗಂಟೆಗಟ್ಟಲೆ ಭಾಷಣ ಮಾಡಿದರೇನೂ ಪ್ರಯೋಜನವಾಗದು. ಇದನ್ನು ಮಾಡುವುದಕ್ಕೆ ನಮ್ಮ ಒಕ್ಕೂಟವು ಸರಿಯಾದ ರೀತಿಯ ವ್ಯವಸ್ಥೆಯನ್ನು ಮಾಡಿ ಗ್ರಾಮ ಗ್ರಾಮಗಳ ಅಂಕಿ ಅಂಶಗಳನ್ನು ಶೇಖರಿಸಿ ಎಲ್ಲಾ ಗ್ರಾಮದ ಅಂಕಿ ಅಂಶಗಳನ್ನು ಜಿಲ್ಲಾವಾರು ಅಂಕಿ ಅಂಶವನ್ನೂ ತಯಾರು ಮಾಡಬೇಕು. ಈ ರೀತಿ ದಕ್ಷಿಣ ಕನ್ನಡ ಹಾಗೂ ಕೊಡಗು ಜಿಲ್ಲೆಯ ಅಂಕಿ ಅಂಶಗಳನ್ನು ಸೇರಿಸಿ ಎರಡು ಜಿಲ್ಲೆಯ ಅಂಕಿ ಅಂಶಗಳ ಪಟ್ಟಿ ದ. ಕ. ಮತ್ತು ಕೊಡಗು ಗೌಡ ಅಭಿವೃದ್ಧಿ ಸಂಘದ ಕಛೇರಿಯಲ್ಲಿಡಬೇಕು. ಆಯೋಗದ ಕರೆ ಬಂದಾಗ ದ. ಕ. ಮತ್ತು ಕೊಡಗು ಗೌಡ ಅಭಿವೃದ್ಧಿ ಸಂಘದ ಮುಖಾಂತರ ಮಂಡಿಸುವಂತಾಗಬೇಕು.

20ನೇ ಪುಟಕ್ಕೆ

ಮಳೆಯ ನೀರು, ಮನೆಯ ನೀರು ಪಶ್ಚಿಮ ನೈರುತ್ಯದಿಂದ ಹೋದರೆ – ಕೆಡುವುದು ಗಂಡಸಿನ ಆರೋಗ್ಯ

# ಭಾಗಮಂಡಲದ ಆಟಿ ಪೊಲಿಕಾನ ಉತ್ಸವ

ಕರ್ಕಾಟಕ (ಆಟಿ) ಮಾಸದಲ್ಲಿ ಕೊಡಗಿನಲ್ಲಿ ಯಾವುದೇ ಉತ್ಸವ ಶುಭ ಕಾರ್ಯಗಳನ್ನು ಮಾಡುವುದಿಲ್ಲ. ಆದರೆ ಆಟಿ ತಿಂಗಳ ಅಮಾವಾಸ್ಯೆಯಂದು ಭಾಗಮಂಡಲದ ಭಗಂಡೇಶ್ವರ ದೇವಾಲಯದಲ್ಲಿ ಪೊಲಿಕಾನ ಉತ್ಸವ ನಡೆಸುತ್ತಿರುವುದು ವಿಶೇಷ. ಬಾಳೆಯ ದಿಂಡುಗಳನ್ನು ಸೀಳಿ ಆ ಪಟ್ಟೆಯನ್ನು ಜೋಡಿಸಿ ಚೌಕ



ಬಾಳೆಪಟ್ಟೆಯಿಂದ ತಯಾರಿಸಿದ "ಪೊಲಿಕಾನ"ಕ್ಕೆ ಕುಂಕುಮಾರ್ಚನೆ ಮಾಡಿ ಅದನ್ನು ಹೊತ್ತ ಅರ್ಚಕರು ಭಗಂಡೇಶ್ವರ ದೇವಸ್ಥಾನಕ್ಕೆ ಪ್ರದಕ್ಷಿಣೆ ಬರುತ್ತಿರುವುದು.

ಆಕಾರದಲ್ಲಿ ಅಂದಾಜು 3 ಅಡಿ ಎತ್ತರದ ಗುಡಿಯನ್ನು ಕಟ್ಟಲಾಗುವುದು. ಅದರ ಮಧ್ಯಭಾಗದಲ್ಲಿ ಒಂದು ದೊಡ್ಡ ಪಂಜನ್ನು ಅಳವಡಿಸಿದ್ದು ನಂತರ ಜ್ಯೋತಿಯನ್ನು ಉರಿಸಲಾಗುತ್ತದೆ. ಆಯಾತಾಕಾರದ ಮೇಲ್ಭಾಗದಲ್ಲಿ, ತಾಳಿ, ಕರಿಮಣಿ, ಬಿಚ್ಚೋಲೆ, ಚಿಕ್ಕ ಬೆಳ್ಳಿ ತಟ್ಟೆ, ಚಿಕ್ಕ ಬೆಳ್ಳಿಯ ತೊಟ್ಟಿಲು, ಬೆಳ್ಳಿಯ ಮಗುವಿನ ರೂಪವನ್ನು ಇಡಲಾಗುತ್ತದೆ. ಭಗಂಡೇಶ್ವರ ದೇವಾಲಯದಲ್ಲಿ ಮಧ್ಯಾಹ್ನದ ಪೂಜೆ ಆದ ನಂತರ ದೇವಾಲಯದ ತಕ್ಕ ಮುಖ್ಯಸ್ಥರಾದ ಬಳ್ಳಡ್ಕ ಮನೆಯವರು ಕಾವೇರಿ ಅಮ್ಮನಲ್ಲಿ ಪ್ರಾರ್ಥಿಸಿಕೊಂಡು ಅದಕ್ಕೆ ಕುಂಕುಮದಿಂದ ಅರ್ಚನೆ ಮಾಡಿ ಅದನ್ನು ಅರ್ಚಕರು ಹೊತ್ತುಕೊಂಡು ದೇವಸ್ಥಾನಕ್ಕೆ ಸುತ್ತು ಬಂದು ತ್ರಿವೇಣಿ ಸಂಗಮದಲ್ಲಿ ಬಿಡಲಾಗುವುದು. ಈ ಪೊಲಿಕಾನ ಉತ್ಸವವನ್ನು ಆಚರಿಸುವ ಹಿನ್ನೆಲೆ ಹೀಗಿದೆ.

ಪಂ[illegible]ಡುಳೆಗಾಲದ ಈ ಆಟಿ ತಿಂಗಳಲ್ಲಿ ಕಾವೇರಿ ಕೆಂಪಾಗಿ ಉಕ್ಕಿ ಹರಿಯುತ್ತಿರುತ್ತಾಳೆ. ತ್ರಿವೇಣಿ ಸಂಗಮದ ಎದುರು ಇರುವ ಪ್ರೇತವನದಲ್ಲಿ ಕಿತ್ತಳೆ ಮರಗಳು ಇದ್ದವು. ಅದರಲ್ಲಿ ಹಣ್ಣುಗಳು ಕೆಂಪಾಗಿ ಜೋತಾಡುತ್ತಿದ್ದವು. ಇದನ್ನು ಕಂಡ ಬಸುರಿ ಹೆಂಗಸೊಬ್ಬಳು ಈ ಹಣ್ಣು[illegible]ನ್ನು ತಿನ್ನುವ ಬಯಕೆಯಿಂದ ಆಚೆ ಹೋಗಲು ನೀರು ತುಂಬಿ ಹರಿಯುತ್ತಿದ್ದುದರಿಂದ ಸಾಧ್ಯವಾಗದೇ ಕಾವೇರಿಯಲ್ಲಿ ಪ್ರಾರ್ಥಿಸಿದಳಂತೆ. ಪ್ರವಾಹ ನೀರು ಕಡಿಮೆಯಾಗಿ ಆಚೆ ಬದಿಗೆ ಹೋಗಿ ಹಣ್ಣು ತಿಂದು ಈಚೆ ಬರುವಂತಾದರೆ ಹೊಟ್ಟೆಯಲ್ಲಿರುವ ಮಗುವನ್ನು ಕಾವೇರಿಗೆ ಸಮರ್ಪಿಸುವುದಾಗಿ ಪ್ರಾರ್ಥಿಸಿಕೊಂಡಳಂತೆ.

ಆಗ ಕಾವೇರಿ ನದಿಯ ಪ್ರವಾಹ ಕಡಿಮೆಯಾಗಿ ನೀರು ಇಬ್ಭಾಗವಾಗಿ ಬಸುರಿ ಹೆಂಗಸಿಗೆ ದಾರಿ ಮಾಡಿಕೊಟ್ಟಿತು. ಆಗ ಹೆಂಗಸು ಆಚೆಗೆ ಹೋಗಿ ಕಿತ್ತಳೆ ಹಣ್ಣು ತಿಂದು ಬಂದಳು. ನಂತರ ಹೆಂಗಸು ತನ್ನ ಹರಕೆಯನ್ನು ಮರೆತಳು. ನಂತರ ಒಂದು ದಿನ ಹೆಂಗಸು ಮಗುವಿನೊಂದಿಗೆ ಬಂದು ಬಟ್ಟೆ ಒಗೆಯುತ್ತಿದ್ದ ಸಂದರ್ಭದಲ್ಲಿ ಒಮ್ಮೆಲೆ ಪ್ರವಾಹ ಬಂದು ಮಗುವನ್ನು ಸೆಳೆದುಕೊಂಡು ಹೋಯಿತಂತೆ. ಆಗ ತಾಯಿ ಮಗುವನ್ನು ರಕ್ಷಿಸಲು ಪ್ರಯತ್ನಿಸಿದಳು. ಕಾವೇರಿಯಲ್ಲಿ ಪ್ರಾರ್ಥಿಸಿಕೊಂಡಳು. ಆಗ



ಕಾವೇರಿ, ಕನ್ನಿಕೆ, ಸುಜ್ಯೋತಿಯರ ತ್ರಿವೇಣಿ ಸಂಗಮದಲ್ಲಿ "ಪೊಲಿಕಾನ"ವು ದೂರದ ಸಮುದ್ರದತ್ತ ಪಯಣ

ಹಿಂದಿನ ಹರಕೆ ಬಗ್ಗೆ ತಿಳಿದು ಈ ರೀತಿ ಸಾಂಕೇತಿಕವಾಗಿ ಹರಕೆ ಸಲ್ಲಿಸುವಂತೆ ಕಾವೇರಿ ತಿಳಿಸಿದ್ದರಿಂದ ಆ ಪ್ರಕಾರ ಈಗ ಸಾಂಕೇತಿಕವಾಗಿ ಬೆಳ್ಳಿಯ ಮಗುವಿನ ರೂಪ, ಮಗುವಿಗೆ ಮಲಗಲು ಚಿಕ್ಕ ತೊಟ್ಟಿಲು, ಊಟ ಮಾಡಲು ಚಿಕ್ಕ ಬೆಳ್ಳಿ ತಟ್ಟೆ, ಮಗುವಿಗೆ ಬೆಳಕಿಗಾಗಿ ದೊಡ್ಡ ಪಂಜನ್ನು ಉರಿಸಲಾಗುತ್ತದೆ. ಮಗುವಿನ ತಾಯಿಯ ಸಾಂಕೇತಿಕವಾಗಿ ತಾಳಿ, ಕರಿಮಣಿ, ಬಿಚ್ಚೋಲೆ, ಕುಂಕುಮವನ್ನು ಪೊಲಿಕಾನದಲ್ಲಿಟ್ಟು, ಕಾವೇರಿಗೆ ಸಮರ್ಪಿಸಲಾಗುತ್ತದೆ ಎಂದು ಪಳಮೆ.

ಅದರಂತೆ ಪ್ರಾಯಶ್ಚಿತ್ತವಾಗಿ ಪ್ರತಿ ವರ್ಷವೂ ಆಟಿ ಅಮಾವಾಸ್ಯೆಯ ದಿನ ಈ ಉತ್ಸವವನ್ನು ಆಚರಿಸಲಾಗುತ್ತದೆ. ಹಿರಿಯರು ಹೇಳುವಂತೆ ಬಹಳ ಹಿಂದೆ ಆ ದಿನ ಅನ್ನ ಸಂತರ್ಪಣೆಯೂ ನಡೆಯುತ್ತಿತ್ತು. ಹಿಂದಿನ ವೈಭವ ಇಂದು ಇಲ್ಲಿ ಕಾಣುತ್ತಿಲ್ಲವಾದರೂ ಭಗಂಡೇಶ್ವರ ದೇವಸ್ಥಾನದಲ್ಲಿ ವರ್ಷದ ಪ್ರಥಮ ಉತ್ಸವ ಇದಾಗಿದ್ದು ನಂತರ ಇತರ ಉತ್ಸವಗಳು ಬರುವುದು ವಾಡಿಕೆ.

ಲೇಖನ : ಸೂರ್ತಲೆ ಜಯಂತಕುಮಾರ್, ಭಾಗಮಂಡಲ

---

### ಒಂದ್ನ್ಮಾಷ

ಒಬ್ಬು ಪ್ರಖ್ಯಾತಿ ಸಿನಿಮಾ ನಟಿಗೆ ಗೌಜಿಲಿ ಮದ್ವೆ ಆತ್. ಅವಳ್ ಹಸೆಮಣೆ ಇಳಿತಿತ್ತ್. ಆಗ ಅಪ್ಪ ಸೆಕ್ರೆಟರಿ ಅಮ್ಮ ಒಂದ್ಮಾತ್ಮಷತ ಹೇಳ್ತ್. ಯಾಕೇತ ಕೇಳ್ತ್ ಅವ್ವ. ದಯವಿಟ್ಟ್ ತಾಳಿ ತೇಗಿ ಬ್ಯಾಡಿ. ಇದ್ ನಿಜವಾದ ಮದುವೆತ ಸೆಕ್ರೆಟರಿ ಹೇಳ್ತ್.

– ಪೇರಿಯನ ಶಿವಪ್ಪ ವಿವೇಕ್

# ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹನಿರ್ದೇಶಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಆದ ಕೊಂಪುಳೀರ ಆನಂದ (D. D. P. I.)



ಮಡಿಕೇರಿ ತಾಲ್ಲೂಕು, ಐಕೊಳ ಗ್ರಾಮದ ಕೊಂಪುಳೀರ ಕಾಳಪ್ಪ ಮತ್ತು ರುಕ್ಮಿಣಿ ದಂಪತಿಯವರಿಗೆ ಎರಡು ಜನ ಮಕ್ಕಳು. ಮೊದಲಿಗರು ಆನಂದನವರು ಹಾಗು ತಂಗಿ ಗಂಗಮ್ಮ. ಇವರು 11-1-1930ರಲ್ಲಿ ಜನಿಸಿದರು. ಇವರ ವಿದ್ಯಾಭ್ಯಾಸವು ಒಂದನೇ ತರಗತಿಯಿಂದ 5ನೇ ತರಗತಿಯವರೆಗೆ ಕಿರಿಯ ಪ್ರಾಥಮಿಕ ಶಾಲೆ ಮರಗೋಡುನಲ್ಲಿ ನಡೆಯಿತ್ತಿತ್ತು. I ಫಾರಂನಿಂದ III ಫಾರಂವರೆಗೆ ಹಿರಿಯ ಪ್ರಾಥಮಿಕ ಶಾಲೆ ಮುರ್ನಾಡುನಲ್ಲಿ, IV ಫಾರಂ ನಿಂದ VI Form (S.S.L.C.) ಸೆಂಟ್ರಲ್ ಹೈಸ್ಕೂಲ್ ಮಡಿಕೇರಿಯಲ್ಲಿಯೂ, Junior Intermediate to B.A. ಸರಕಾರಿ ಕಾಲೇಜು ಮಂಗಳೂರಿನಲ್ಲಿಯೂ, B. T. ಸರಕಾರಿ ಪ್ರೌಢಶಾಲೆ, ಶಿಕ್ಷಕರ ತರಬೇತಿ ಕಾಲೇಜು ಮಂಗಳೂರಿನಲ್ಲಿಯೂ ಮಾಡಿದರು. ಇವರು ಮೊದಲು ಉದ್ಯೋಗ ಪದವಿ ಶಿಕ್ಷಕರಾಗಿ ತಾ. 16-8-1954ರಲ್ಲಿ ಸರಕಾರ ಪ್ರೌಢಶಾಲೆ ನಾಪೋಕ್ಲುನಲ್ಲಿ (1954-1964ವರೆಗೂ, ನಂತರ ಸರಕಾರಿ ಪದವಿ ಪೂರ್ವ ಶಿಕ್ಷಣ ಕಾಲೇಜು ಮಡಿಕೇರಿಯಲ್ಲಿಯೂ ತದನಂತರ 1964 ರಿಂದ 1966ರವರೆಗೆ ಮುಖ್ಯೋಪಾಧ್ಯಾಯ ರಾಗಿಯೂ, ಸರಕಾರಿ ಪ್ರೌಢಶಾಲೆ ಕಡೂರು, ಶಿಕಾರಿಪುರ ತಾಲ್ಲೋಕು, ಶಿವಮೊಗ್ಗ ಜಿಲ್ಲೆಯಲ್ಲಿ 1966-68ರವರೆಗೆ 14 ತಿಂಗಳು ತನಕ ಕಾರ್ಯ ನಿರ್ವಹಿಸಿದ್ದು, 1968-1971ರಲ್ಲಿ ಪದವೀಧರ ಶಿಕ್ಷಕ ಪದವಿ ಪೂರ್ವ ಶಿಕ್ಷಣ ಕಾಲೇಜು ಮಡಿಕೇರಿಯಲ್ಲಿ ಅಲ್ಲಿ (ನ್ಯಾಯಾಲಯದಲ್ಲಿ ಹಳೆ ಮೈಸೂರು ಶಿಕ್ಷಕರು ಮೊಕದ್ದಮೆ ಮಾಡಲಾಗಿ ಜಯ ಗಳಿಸಿ ಹೊಸ ಮೈಸೂರು ಶಿಕ್ಷಣಕ್ಕೆ ಹಿಂಬಡ್ತಿ ಕೊಡಲಾಯ್ತು) ಹೀಗೆ 1971-74ರಲ್ಲಿ ಬಡ್ತಿ ಹೊಂದಿ ಕೊಡಗು ಜಿಲ್ಲೆ ಶಿಕ್ಷಣ ಉಪನಿರ್ದೇಶಕರ ಕಚೇರಿಗೆ (D.D.P.I) ಆಂಗ್ಲ ಭಾಷೆ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿದರು. 1974-77ರಲ್ಲಿ ವೀರಾಜಪೇಟೆ ತಾಲ್ಲೋಕು ಸಹಾಯಕ ವಿದ್ಯಾಧಿಕಾರಿಯಾಗಿ (A. E. O.) ಆಗಿ ವರ್ಗ. 1977-81ರಲ್ಲಿ ಬಡ್ತಿ ಹೊಂದಿ ಮೈಸೂರು ಜಿಲ್ಲಾ ಶಿಕ್ಷಣಾಧಿಕಾರಿಯಾಗಿ (Education Officer) ಆಗಿ ಮೈಸೂರು ಜಿಲ್ಲಾ ಉಪನಿರ್ದೇಶಕರ ಕಛೇರಿಗೆ (D. D. P. I.) ಆಗಿ ವರ್ಗ. 1981-83ರಲ್ಲಿ ಬಡ್ತಿ ಹೊಂದಿ ಚಿಕ್ಕಮಗಳೂರು ಜಿಲ್ಲಾ ಉಪನಿರ್ದೇಶಕರಾಗಿ ವರ್ಗ (D.D.P.I.) 1983 ರಿಂದ 6 ತಿಂಗಳು ಕಾಲ ಕರ್ನಾಟಕ ರಾಜ್ಯ ವೃತ್ತಿ ಶಿಕ್ಷಣ ನಿರ್ದೇಶಕರ ಕಛೇರಿ ಬೆಂಗಳೂರಿಗೆ, ವೃತ್ತಿ ಶಿಕ್ಷಣ ಉಪನಿರ್ದೇಶಕರಾಗಿ ವರ್ಗ [D.D.P.I.] [Vactional Education] 1983-84ರಲ್ಲಿ ಪುನಃ ಚಿಕ್ಕಮಗಳೂರು ಜಿಲ್ಲಾ (D.D.P.I.] ಆಗಿ ವರ್ಗ. 1984 ರಿಂದ 31-1-1988 ; 3½ ವರ್ಷ ಬಡ್ತಿ ಹೊಂದಿ ಕರ್ನಾಟಕ ರಾಜ್ಯ ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತ ಕಛೇರಿ ಬೆಂಗಳೂರು ಪ್ರೌಢ ಶಿಕ್ಷಣ ಶಾಖೆಯ ಸಹ ನಿರ್ದೇಶಕರಾಗಿ ವರ್ಗ. ಹೀಗೆ ಹಲವಾರು ಕಡೆ ಶಿಕ್ಷಕ ವೃತ್ತಿಯಲ್ಲಿಯೂ ಮತ್ತು ಅಧಿಕಾರಿಯಾಗಿಯೂ ಅಪಾರ ಸೇವೆ ಸಲ್ಲಿಸಿ ದಿನಾಂಕ 31-1-1988ರಲ್ಲಿ ಅದೇ ಕಛೇರಿಯಲ್ಲಿ ನಿವೃತ್ತಿ ಹೊಂದಿದರು. ಹೀಗೆ ಹಲವಾರು ಜಿಲ್ಲೆಗಳಲ್ಲಿ ಅಧಿಕಾರಿಯಾಗಿ ಒಟ್ಟು 33½ ವರುಷಗಳು ಸರ್ಕಾರಿಯಲ್ಲಿ ಸೇವೆ ಸಲ್ಲಿಸಿದ ಶ್ರೀಮಾನ್ ಕೊಂಪುಳೀರ ಆನಂದನವರನ್ನು ಗೌಡ ಜನಾಂಗದ ಶ್ರೇಷ್ಠ ವ್ಯಕ್ತಿ ಎಂದರೆ ತಪ್ಪಾಗಲಾರದು.

ಆನಂದನವರು ಕಿವಿಯ ಅಡಚಣೆಯಿಂದ 10 ವರ್ಷಗಳವರೆಗೆ ವೈದ್ಯಕೀಯ ಸಲಹೆ ಪಡೆದು ಕೂಡ ಏನು ಅಭಿವೃದ್ಧಿಯಾಗದ ಕಾರಣ ಮೈಸೂರಿನ All India Speech and Hearing Instituteನಲ್ಲಿ Operation ಮಾಡಿಸಲು ಪ್ರಯತ್ನ ಮಾಡಿ ಅದು ಸಾಧ್ಯವಾಗದೆ ವೈದ್ಯರ ಸಲಹೆಯಂತೆ Hearing Aid ತರಿಸಿಕೊಂಡು ಈವಾಗಲೂ ಕೂಡ ಉಪಯೋಗಿಸುತ್ತಿರುವರು. ಇದು ನನ್ನ ದುರಾದೃಷ್ಟ ಎಂದು ತುಂಬಾ ಬೇಸರದಿಂದ ಹೇಳುವರು.

Hearing aid ಹಾಕಿಸಿಕೊಂಡ ಮೇಲೆ ಆದ ಬದಲಾವಣೆ ತಿಳಿಸಿ ಎಂದಾಗ, ನಾನು ಶಿಕ್ಷಕನಾಗಿದ್ದಾಗ ಬೋಧಿಸುವ ವಿಷಯಗಳು English and Maths, English ಭಾಷೆ ಬೋಧನೆಯಲ್ಲಿ ವಿದ್ಯಾರ್ಥಿಗಳೊಡನೆ ಹೆಚ್ಚು ಮಾತಾಡಬೇಕಿತ್ತು. ಆದರಿಂದ ಉತ್ತರಗಳನ್ನು ಪಡೆಯಬೇಕಿತ್ತು ಕಿವುಡುತನ ಇರುವುದರಿಂದ ಬೋಧನೆಗೆ ತೊಂದರೆ ಉಂಟಾಗುತ್ತಿತ್ತು. ಈ ಕೊರತೆ ಕಂಡು ನನ್ನ ಮುಖ್ಯೋಪಾಧ್ಯಾಯರು ಬರೆ ಗಣಿತ ವಿಷಯವನ್ನು ಬೋಧಿಸಲು ಸಲಹೆ ಕೊಡುತ್ತಿದ್ದರು. ಈ ವಿಷಯವನ್ನು ಬೋಧಿಸುವಾಗ ಮಕ್ಕಳೊಡನೆ ಹೆಚ್ಚು ಸಂಭಾಷಣೆಯಿಲ್ಲ. Black Boardನಲ್ಲಿ ಹೆಚ್ಚು ಕೆಲಸ. ಹಾಗಾಗಿ ನನ್ನ ಅದೃಷ್ಟಕ್ಕೆ ನನ್ನ ವೃತ್ತಿಯಲ್ಲಿ ಏನು ತೊಂದರೆಯಾಗಲಿಲ್ಲ. ನನ್ನ ಬಡ್ತಿಗೂ ತೊಂದರೆಯಾಗಲಿಲ್ಲ. ನ್ಯಾಯವಾಗಿ ದೊರಕಬೇಕಾಗಿದ್ದ ಬಡ್ತಿ ನನಗೆ ಸಿಕ್ಕಿದೆ ಎಂದು ಸಂತೋಷದಿಂದ ಹೃದಯ ತುಂಬಿ ಹೇಳುವರು.

ಆನಂದನವರು 1952 ಮೇ 4ರಂದು ಮಡಿಕೇರಿ ತಾಲ್ಲೂಕು ಮುರ್ತಾಮುಡಿ ಗ್ರಾಮದ ಕೊಡೆಕಲ್ಲು ದಿವಗಂತ ಮಂದಣ್ಣನವರ ಏಕ ಮಾತ್ರ ಪುತ್ರಿ ಗಂಗಮ್ಮಳನ್ನು ವಿವಾಹವಾದರು. ಆನಂದನವರು Junior B.A.ಯಲ್ಲಿ ಓದುತ್ತಿರುವಾಗಲೇ ವಿವಾಹವಾಗಿ...

ಪಾಸಾದ ನಂತರ 1953ರಲ್ಲಿ Senior B. A. ಓದಿ ಪಾಸಾಗಿ 1954ರಲ್ಲಿ B. T. ಓದಿ ಪಾಸಾಗಿ 16-8-1954ರಲ್ಲಿ ಅವರಿಗೆ ಉದ್ಯೋಗ ಸಿಕ್ಕಿರುವುದು. ಅವರು ಮದುವೆಯಾದ ನಂತರವು 2 ವರ್ಷ ವಿದ್ಯಾಭ್ಯಾಸ ಮಾಡಿದರು. ಆನಂದನವರು ವಿದ್ಯಾರ್ಥಿಯಾಗಿದ್ದಾಗಲೇ 1952ರಲ್ಲಿ ಮಾರ್ಚ್ ತಿಂಗಳಲ್ಲಿ ಅವರ ತಾಯಿ ದೈವಾಧೀನರಾದರು. ತಂದೆ ಮತ್ತು ತಂಗಿ ಇಬ್ಬರಿಗೆ ಗೃಹಕೃತ್ಯದ ಬಗ್ಗೆ ಕಷ್ಟ ಕಂಡು ಬಂದಿದ್ದರಿಂದ 22 ವರ್ಷ ಪ್ರಾಯದಲ್ಲಿ ವಿವಾಹ ಆಗಬೇಕಾಯಿತು ಎಂದು ಹೇಳುವರು.

ಆನಂದನವರಿಗೆ 4 ಜನ ಮಕ್ಕಳು. ಒಬ್ಬ ಗಂಡು ಮೂರು ಹೆಣ್ಣು ಮಕ್ಕಳು. ಮೊದಲ ಮಗಳು ಉಮಾದೇವಿ. B. A., B.E., ಆಗಿ ಬೆಂಗಳೂರಿನಲ್ಲಿ ಖಾಸಗಿ ಪ್ರೌಢಶಾಲೆಯಲ್ಲಿ ಶಿಕ್ಷಕಿಯಾಗಿರುತ್ತಾರೆ. ಎರಡನೆಯವರು ಮಗ ಬೋಪಯ್ಯ ಡಿಗ್ರಿ ಆಗಿ Diploma in Mechanical Engineering. ಚೆಟ್ಟಳ್ಳಿ ಕಾಫಿ Reserch Sub Stationನಲ್ಲಿ foreman ಆಗಿ ಕಾರ್ಯನಿರ್ವಹಿಸುತ್ತಿರುವರು. ಮೂರನೆಯವಳು ಗೌರಮ್ಮ B.Sc., B.Ed., ಆಗಿ ಬೆಂಗಳೂರಲ್ಲಿ ಸೆಂಟ್ ಏನ್ಸ್ ಕಾನ್ವೆಂಟ್‌ನ High School Teacher ಆಗಿ ಕೆಲಸ ಮಾಡುತ್ತಿರುವರು. ಕೊನೆಯವಳು ರಮಾದೇವಿ ಇವರು B.Sc., (Agriclt) ಡಿಗ್ರಿ ಪಡೆದು ಪತಿ ಚೋಂಡಿರ ಕಾರ್ಯಪ್ಪನೊಂದಿಗೆ ಸುಖ ಸಂಸಾರ ನಡೆಸುತ್ತಿರುವರು. ಸೊಸೆ ಕುಸುಮಾ ಗೃಹಿಣಿಯಾಗಿ ಮನೆಯ ವ್ಯವಸ್ಥೆಯನ್ನು ನೋಡಿಕೊಳ್ಳುವುದಲ್ಲದೆ ಐಕೊಳ ಗ್ರಾಮದ ಯುವತಿ ಮಂಡಳಿಯ ಅಧ್ಯಕ್ಷೆಯಾಗಿ ಸಾಕಷ್ಟು ಸಮೂಹ ಕಾರ್ಯದಲ್ಲಿ ತನ್ನನ್ನೇ ತಾನೇ ತೊಡಗಿಸಿಕೊಂಡಿರುವರು.

ಆನಂದನವರು ಗೌಡ ಜನಾಂಗದ ಅಭಿವೃದ್ಧಿಗಾಗಿ ಶ್ರಮ ವಹಿಸಿದ್ದು ಮರಗೋಡು ಗೌಡ ಸಮಾಜದ ಕಾರ್ಯಕರ್ತರಾಗಿರುತ್ತಾರೆ. ಆ ಕಾರ್ಯದಲ್ಲಿ ತೃಪ್ತಿ ಸಿಕ್ಕಿದೆಯಾ? ಎಂದು ಕೇಳಿದಾಗ ನಾನು ಮೇಲಿನ ಸಮಾಜದ ಆಡಳಿತ ಮಂಡಳಿಯಲ್ಲಿ ಪ್ರಾರಂಭದಲ್ಲಿ ಗೌರವ ಅಧ್ಯಕ್ಷನಾಗಿದ್ದೆ. ಅನಾರೋಗ್ಯದ ಕಾರಣ ಮುಂದುವರಿಯಲು ಸಾಧ್ಯವಾಗಲಿಲ್ಲ. ಆದರೂ ನಾನು ಸಮಾಜದ ಕೆಲಸ ಕಾರ್ಯಗಳಲ್ಲಿ ಪ್ರೋತ್ಸಾಹ ನೀಡುತ್ತಿದ್ದೇನೆ. ಅಲ್ಲದೆ ಸಮಾಜಕ್ಕಾಗಿ ರೂ. 27,001ಗಳನ್ನು ಉದಾರವಾಗಿ ಸಹಾಯ ಮಾಡಿದ್ದೇನೆ. ಇದು ನನ್ನ ಮನಸ್ಸಿಗೆ ತೃಪ್ತಿ ತಂದಿದೆ ಎನ್ನುವರು.

ಇದೂ ಅಲ್ಲದೆ ಇವರು ಮುಂದಿನ ಪೀಳಿಗೆಗೆ ಪ್ರೋತ್ಸಾಹ ನೀಡಲು ನಂಜರಾಯ ಪಟ್ನ ಪ್ರೌಢಶಾಲೆ, ಮರಗೋಡು ಕಿರಿಯ ಕಾಲೇಜು, ಹಿರಿಯ ಪ್ರಾಥಮಿಕ ಶಾಲೆ ಹಾಕತ್ತೂರು ಪ್ರೌಢಶಾಲೆಗಳಲ್ಲಿ ರೂ. 1,000ರಂತೆ ಪ್ರತಿ ಶಾಲೆಗಳಲ್ಲಿ ದತ್ತು ನಿಧಿಯನ್ನು ಪ್ರಾರಂಭಿಸಿ ಆ ನಿರಖು ಠೇವಣಿ ಬಡ್ಡಿಯಿಂದ ಪ್ರತಿ ವರ್ಷ ಎಸ್.ಎಸ್.ಎಲ್.ಸಿ. ಮತ್ತು 7ನೇ ತರಗತಿಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆ ಯಾಗುವ ವಿದ್ಯಾರ್ಥಿಗಳಿಗೆ ಶಿಷ್ಯ ವೇತನವಾಗಿ ವಿತರಿಸಲಾಗುವುದು. 2000ರ ಅಕ್ಟೋಬರ್ ತಿಂಗಳಲ್ಲಿ ಮರಗೋಡು ಗೌಡ ಸಮಾಜದಲ್ಲಿ ನಡೆದ ಕೈಲ್ ಮುಹೂರ್ತ ಸಮಾರಂಭದಲ್ಲಿ ಮರಗೋಡು ಕೇಂದ್ರದ ಹೆಣ್ಣು ಮಕ್ಕಳಿಗೆ ಶಿಕ್ಷಣಕ್ಕೆ ಪ್ರೋತ್ಸಾಹಿಸುವಂತೆ ರೂ. 5,000/-ನ್ನು ನಿರಖು ಠೇವಣಿಯಾಗಿರಿಸಿ ಲಭ್ಯವಾಗುವ ವಾರ್ಷಿಕ ಬಡ್ಡಿಯನ್ನು ಮರಗೋಡು ಭಾರತಿ, P. U. C. Collegeನಲ್ಲಿ ಉತ್ತಮ ಶ್ರೇಣಿಯಲ್ಲಿ II P.U.C.ಯಲ್ಲಿ ತೇರ್ಗಡೆಯಾಗುವ ವಿದ್ಯಾರ್ಥಿಗೆ ಶಿಷ್ಯ ವೇತನವನ್ನಾಗಿ ವಿತರಿಸಲಾಗುವುದು.

ಈಗ ನಾನು ಮುಖ್ಯವಾಗಿ ಪ್ರತಿ ದಿನ ಬೆಳಿಗ್ಗೆ 6-00 ಗಂಟೆಗೆ ಎದ್ದು ನಿತ್ಯ ಕರ್ಮ ಮುಗಿಸಿ Physical Exersise 1/2 ಗಂಟೆ ಮಾಡುತ್ತೇನೆ. ನಂತರ 2 K. M.ನಷ್ಟು ನಡೆಯುತ್ತೇನೆ. ನಂತರ ಬೆಳಗ್ಗಿನ ಉಪಹಾರ ಮುಗಿಸಿ ವರ್ತಮಾನ ಪತ್ರಿಕೆ ಓದುತ್ತೇನೆ. ನಂತರ ಗದ್ದೆ, ತೋಟದಲ್ಲಿ ನಡೆಯುವ ಕೆಲಸ ಕಾರ್ಯಗಳ ಬಗ್ಗೆ ಗಮನ ಹರಿಸುತ್ತೇನೆ. ಸ್ಥಳೀಯ ಶಾಲೆಗಳಲ್ಲಿ ನಡೆಯುವ ಸಮಾರಂಭಗಳಿಗೆ ಹಾಜರಾಗುತ್ತೇನೆ. ಸಾಮಾನ್ಯವಾಗಿ, ಮಳೆಗಾಲ, ಚಳಿಗಾಲದ ಸಮಯದಲ್ಲಿ ಬೆಂಗಳೂರಿಗೆ ಹೋಗಿ ಮಕ್ಕಳೊಡನೆ ಒಂದೆರಡು ತಿಂಗಳು ತಂಗುತ್ತೇನೆ ಎನ್ನುತ್ತಾರೆ ಹಿರಿಯ ಮುತ್ಸದ್ಧಿ.

ನಿಮಗೆ ಸನ್ಮಾನ ಮತ್ತು ಪ್ರಶಸ್ತಿಗಳು ಲಭಿಸಿದೆಯೇ ಎಂದು ಸಂಗಾತಿ ಪ್ರಶ್ನಿಸಿದಾಗ ನಾನು ಶಿಕ್ಷಣ ಇಲಾಖೆಯಲ್ಲಿ ಶಿಕ್ಷಕ ವೃತ್ತಿಯಿಂದ ಪ್ರಾರಂಭಿಸಿ ಸಹ ನಿರ್ದೇಶಕನಾಗಿ ನಿವೃತ್ತಿ ಹೊಂದಿದೆ. ಒಟ್ಟು ಸೇವಾವಧಿ 33½ ವರ್ಷ ಶಿಕ್ಷಕನಾಗಿ ಮತ್ತು ಅಧಿಕಾರಿಯಾಗಿ ಪ್ರಾಮಾಣಿಕತೆಯಿಂದ ಸೇವೆ ಸಲ್ಲಿಸಿದ್ದೇನೆ. ನನ್ನ ವೃತ್ತಿಯ ಪ್ರತಿಯೊಂದು ಹಂತದಲ್ಲೂ ನಾನು ಧೈರ್ಯದಿಂದ ಕರ್ತವ್ಯ ನಿರ್ವಹಿಸಿದ ತೃಪ್ತಿ ನನಗಿದೆ. ಇದೇ ನನಗೆ ಲಭಿಸಿದ ಪ್ರಶಸ್ತಿಗಳು ಮತ್ತು ಸನ್ಮಾನಗಳು. ಯಾವ ತನಿಖೆಗೂ, ಪುಕಾರಿಗೂ ಒಳಗಾಗದೆ ಶುದ್ಧಹಸ್ತನಾಗಿ ನಿವೃತ್ತಿ ಹೊಂದಿದ್ದೇನೆ. ಈ ಆತ್ಮ ತೃಪ್ತಿಯೇ ನನಗೆ ಸಂದ ಸನ್ಮಾನ ಎಂದು ಹಸನ್ಮುಖಿಯಾಗಿ ಹೇಳಿದರು. ಈವರೆಗೆ ಕೆಲವು ಮಾರ್ಗದರ್ಶನವನ್ನು ಮಕ್ಕಳಿಗೆ ನೀಡಿ, ಪ್ರೋತ್ಸಾಹಿಸಿದ ನೀವು ನಿಮ್ಮ ಹಿತನುಡಿಗಳು ಜನರಿಗೆ ದಾರಿ ದೀಪವಾಗಲಿ. ಹಾಗೆಯೇ ಕುಲ ದೇವರಾದ ತಿರುಪತಿ ವೆಂಕಟರಮಣ, ಶರ್ವಾಂಬೆ ಅವರಿಗೂ ಅವರ ಕುಟುಂಬಕ್ಕೂ ಆಯುಷ್ಯ ಆರೋಗ್ಯ ಕೊಟ್ಟು ಕಾಪಾಡಲಿ ಎಂದು ಹಾರೈಸುವ

ಬರಹ : ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

ವಿ. ಸೂ. : ಸ್ವಾತಂತ್ರ್ಯ ನಂತರದ ಸಾರ್ವಜನಿಕ ಶಿಕ್ಷಣ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿ, ಅನುಭವ ಪರಿಣಿತಿ ಹೊಂದಿ ನಿವೃತ್ತರಾದ ಶ್ರೀಯುತರನ್ನು ಗೌಡ ಜನಾಂಗದ ಸಂಘ ಸಂಸ್ಥೆಗಳು ಇನ್ನು ಸನ್ಮಾನಿಸದಿರುವುದು ನಿಜಕ್ಕೂ ಶೋಭೆ ತರುವಂತದಲ್ಲ ಎಂದು ಈ ಸಂದರ್ಭದಲ್ಲಿ ಸಂಗಾತಿ ವಿಷದ ವ್ಯಕ್ತಪಡಿಸುತ್ತಿದೆ.

ಸಂ-

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಹಿ - 36

ಹಿಂದೆ ನಡದದ್.......

ತಂಗೆ ಶೋಭಳ ಮದ್ವೆ ಚಪ್ಪರದ ದಿನ ಮನೆವು, ಊರವು ನೆಂಟ್ರ್‌ಗ ಎಲ್ಲಾ ಬಹಳ ಸಂತೋಷಲಿ ಬಂದ್‌ಸೇರಿದ್ರೊ. ಆದ್ರೇ ಶಾಸ್ತ್ರ ಆಗುವ ಸಮಯಲಿ ಮದುಮಂಜಗೆ ಈ ಊರ್‌ನ ಹ್ಯದಂಗ ವರದಕ್ಷಿಣೆ ತಕೊಂಡೊದರ ಬಗ್ಗೆ ಬಹಳ ಅವಮಾನ ಆಗುವ ಹಂಗೆ ತಮಾಷೆ ಮಾಡಿ ಬುಟ್ಟಿದ್ರೊ. ಅಷ್ಟೊತ್ತಿಗೆ ಮೈಸೂರು ಕಡೇಂದ ಒಂದ್ ಗುಂಪು ಜನ ಮದ್ವೆ ಮನೆಗೆ ಬಂದ್ ಸೇರ್‍ದ್ರೊ. ಅವುಕೂ ಇಲ್ಲಿ ಆಧಾರದ ಆತಿಥ್ಯನ ಮಾಡ್ರೊ.........

ಮುಂದಕೆ...........

ಬೆಳಗ್ಗಿನ ಜಾವ ನಾಲ್ಕು ಗಂಟೆ ಕೋಳಿ ಕೂಗಿಕೆ ಮುಂದೆ ಕೆಳಮನೆ ಬೋಪಜ್ಜನ ಮನೆಲಿ ಕೆಲವು ಹೆಣ್ಣ್‌ಜನ ನಿದ್ರೆಂದ ಎದ್ದ್ ನಿದ್ರೇ ಕಣ್ಣ್‌ನ ಉಜ್ಜಿಕಂಡೇ ಮದ್ವೆ ಮನೆಕೆಲಸ ಕಾರ್ಯಗಳ ಮಾಡಿಕೆ ಓಡಾಡುತ್ತಿದ್ರೊ. ಯಾಕೆತ್ತೇಳಿರೆ ಈ ವಯಸ್ಸಾದ ಅಕ್ಕಂದಿರಿಗೆ ಅಡಿಗೆ ಮನೆ ಜವಾಬ್ದಾರಿನೇ ಮೊದ್ಲ್ ಕಾಂಬೋದು. ಆದ್ರೆ ಇನ್ನು ಕೆಲವು ಅಕ್ಕಂದಿರ್ ಈ ಮದುಮಗಳು ಶೋಭನ ಮೆಲ್ಲೆ ಕರ್ದ್ ಎಳ್ಸಿಕಂಡ್ ಅವಳಿಗೆ ಬಚ್ಚಲ್ ಮನೆ ಕಡೆಗೆ ಹೋದ್ರೊ. ಆಗ ಬಂದಿದ್ದ ಅಕ್ಕಪಕ್ಕದ ಹೆಣ್ಣ್‌ಜನ ಒಬ್ಬೊಬ್ಬನೇ ಬೇಗ ಬೇಗ ಎದ್ದ್ ಬಂದ್ ಜೊತೆಗೆ ಸೇರಿಕಂಡೊ. ಬೆಳಕ್ ಹರಿಯಕೆ ಮುಂದೇನೆ ಮದುಮಗಳ ಸ್ನಾನ ಮಾಡ್ಸಿಕಂಡ್ ನೆಲ್ಲಕ್ಕಿ ಎದುರ‍್ಗಡೆಗೆ ಕರ್ಕಂಡ್ ಬಂದ್ ಕೂರ್ಸಿಕಂಡ್ ಅಕ್ಕಿಶಾಸ್ತ್ರ, ರಂಗೋಲಿ ಶಾಸ್ತ್ರ, ಹಿಂಗೆ ಹಲವಾರು ಶಾಸ್ತ್ರಗಳ ಮಾಡಿಕೆ ಶುರು ಮಾಡ್ರೊ.

ಬೆಳಗ್ಗಿನ 6ಗಂಟೆ ಸಮಯ. ಮೈಸೂರು ಮಂಗಳೂರು ಸೆಮಿಲಕ್ಷುರಿ ಬಸ್ ಮೈಸೂರುಸ್ಟಾಂಡ್‌ನ ಬುಟ್ಟತ್. ಅದರ‍್ಲಿ ಫ್ರಂಟ್ ಡಬಲ್ ಸೀಟ್ ಒಂದರಲ್ಲಿ ಒಬ್ಬ ನೇಪಾಳಿ ಧರ್ಮಗುರು ಧರ್ಮಪಾಲ್ ಕುದ್ದಿತ್ ಅವರ ಪಕ್ಕಲಿ ಒಂದ್ ಮಾಡ್ರನ್ ಗೂಡೆ ಕೂಲಿಂಗ್ ಗ್ಲಾಸ್‌ನ ಹಾಕಂಡ್‌ಕೈಲಿ ಒಂದ್ ಸಣ್ಣ ಬ್ರೀಫ್‌ಕೇಸ್‌ನ ಹಿಡ್ಕಂಡ್ ಕುದ್ದಿತ್. ಕೊನೆ ಹಿಂದುಗಡೆ ಸೀಟ್‌ಲಿ ಕಿಕ್ಕೇರಿ ಸ್ಟೇಷನ್ ಪೋಲೀಸ್ ಧಫೇದಾರ ಮಿ. ಭೀಮಯ್ಯ ಕುದ್ದಿದ್ರೊ. ಮಧ್ಯೆ ಸೀಟ್‌ಲಿ ಬಾಂಬೆ ಗಾರ್ಮೆಂಟ್ಸ್‌ನ ಕೃಷ್ಣವತಾರ್‌ಸಿಂಗ್ ಮತ್ತೆ ಲಾರಿ ಡ್ರೈವರ್ ದಾಸ್ ಹಿಂಗೆ ಯಾರ‍್ಯಾರೆಲ್ಲಾ ಕುದ್ದಿದ್ರೊ. ಈ ಬಸ್ಸ್ ಹಂಗೇ ಬೆಳಕ್ ಹರ್ದ್ ಬಿಸಿಲ್ ಬೀಳಿಕಾಕನ ಹುಣಸೂರು ಬಸ್‌ಸ್ಟ್ಯಾಂಡ್‌ಂದ ಮುಂದಕ್ಕೆ ಪಾಸಾಗ್‌ತಿತ್.

ಫ್ರಂಟ್ ಸೀಟ್‌ಲಿ ಕುದ್ದಿದ್ದ ನೇಪಾಳಿ ಧರ್ಮಗುರು ಆ ಶಾಂತಿ ಗೂಡೆನ ಕೆಮಿ ಹತ್ರ ತನ್ನ ಪರಿಚಯನ ಹೇಳಿ ಅವಳ ಕೈನ ಹಿಡ್ಕಂಡತ್. ಆಗ ಅವಳು ಬಹಳ ಆಶ್ಚರ್ಯ ಪಟ್ಟ್‌ಕಂಡ್ ತುಂಬಾ ಖುಷೀಲಿ ಕೇಳ್ತ್. ಇದೇನಿದ್ ನಿಮ್ಮ ವೇಷ. ಇನ್ನೂ ನೀವು ವೇಷ ಹಾಕುದರ ಬುಟ್ಟತ್ತಿಲ್ಲ್ಯಾ? ಸಾಕ್ ಇನ್ ನಿಮ್ಮ ಈ ಅದ್ ಇದ್ ವೇಷಂಗ. ನಂಗೆ ನನ್ನ ನಿಜವಾದ ಹೀರೋ ರಾಜುನೆ ಬೇಕ್‌ತಾ ಅವನ ಕೆಮಿ ಹತ್ರ ಗುಟ್ಸ್‌ಲಿ ಕೇಳಿಕಂಡತ್. ಆಗ ಮಿ. ರಾಜು ಅವಳ ಕೈನ ಸವರಿ ಅಲ್ಲಿ ಮೆಲ್ಲಂಗೆ ಹಿಂದೆಗಡೆ ತಿರ್ಗಿ ನೋಡ್ ನನ್ನ ಹಿಂಬಾಲಿಸಿಕಂಡ್ ಇನ್ನೂ ಮೂರು ಪಾರ್ಟಿಗ ಇದೇ ಬಸ್ಸ್‌ಲಿ ಬಂದು ಕುದ್ದೋಳೋ. ಮತ್ತೆ ಒಬ್ಬ ಪೋಲಿಸ್ ಕೂಡಾ ಕುದ್ದುಟ್ಟು ಬಹುಶಃ ಅವು ಕೂಡಾ ನನ್ನ ಹುಡುಕಿಕಂಡ್ ನನ್ನ ತಂಗೆ ಮದ್ವೆಗೆ ಹೊರ‍್ವೊಳೊ ಕಂಡದೆ. ಅಲ್ಲಿ ನನ್ನ ತಂಗೆನೆ ಮದ್ವೆ ಮತ್ತೆ ನನ್ನ ನಿನ್ನ ಮದ್ವೆ ಆದ ಮೇಲೆ ಮಾತ್ರ ನಾನ್ ನನ್ನ ನಿಜರೂಪನ ತೋರ್ಸಿಕಂಬೋದು. ಅಲ್ಲಿವರ್ಗೂ ನಾನ್ ಹಿಂಗೇ ವೇಷ ಮರ್ಸಿಕಂಡೇ ಇರ್‌ಕ್ಕಾದೆ. ಎಲ್ಲಾ ಕಾರ್‌ಬಾರ್‌ಗ ಏನೂ ತೊಂದ್ರೆ ಆಗದಂಗೆ ನನ್ನ ಸ್ನೇಹಿತ ಮಹೇಂದ್ರಪಾಲ್ ನೋಡಿಕೊಂಡದೆ. ಇನ್ನೂ ಏಳೆಂಟ್ ಜನ ಬಹುಶಃ ನನ್ನನ್ನ ಹುಡುಕಿ ಕಂಡ್ ನೆನ್ನೆ ದಿನನೇ ನಮ್ಮ ಮದ್ವೆ ಮನೆಗೆ ಹೋಗಿರುವೋ. ನೀನೇನ್ ಹೆದ್ರ್‌ಬೇಡ. ನನ್ನ ಯಾರೂ ಅಡ್ಡ ಹಾಕಿ ಹಿಡ್ಕಂಡ್ ಹೋಕೆ ಆದುಲ್ಲೆ. ಆದ್ರೂ ನಮ್ಮ ಜಾಗ್ರತೆ ನಮ್ಮ ಕೈಲಿ ಇರೊಕಲ್ಲಾ ತಾ ಧೈರ್ಯ ಹೇಳ್ತ್. ಆಗ ಈ ಶಾಂತಿ ಗೂಡೆ ತನ್ನ ಪಕ್ಕಲಿ ತನ್ನ ಹೃದ್ರಯ ಸಾಮ್ರಾಟ ಮಿ. ರಾಜುನ ಎದೆ ಒಳಗೆ ಹುಕ್ಕ್ ಕುದ್ದ್ ಬುಡೊಕುತ ತಾಳಿಶೆ ಪಟ್ಟತ್. ಅವನ ಕೈನ ತನ್ನ ಎರಡೂ ಕೈಗಳಂದ ಬಿಗ್ದ್ ಹಿಡ್ದ್. ತನ್ನಹಣೆಗೆ, ಎದೆಗೆ ಮುಟ್ಟಿಸಿ ಕಂಡತ್. ಆಮೇಲೆ ಅಂವಂಗೆ ಒತ್ತಿ ಅಂಡಿಕಂಡ್‌ಕುದ್ದ್ ಕಂಡತ್ತ್. ಈ ಇಬ್ಬರೂ ಏನೇನೆಲ್ಲಾ ಪಿಸಿಪಿಸಿತಾ ಕೆಮಿ ಹತ್ರ ಮಾತಾಡಿಕಂಡ್ ನೆಗೆ ಆಡಿಕಂಡ್ ಕುದ್ದಿದ್ರೊ. ಎಲ್ಲಾ ಡೈರೆಕ್ಟ್ ಸೀಟ್ ಇದ್ದ್‌ದರಂದ ಬಸ್ಸು ಒಂದೇ ಸಮಕೆ ಓಡ್‌ತಿತ್. 8 ಗಂಟೆಗೆಲ್ಲಾ ಮಡಿಕೇರಿ ಬಸ್‌ಸ್ಟ್ಯಾಂಡ್‌ನ ಒಳಗೆ ಬಂದ್ ನಿಂತ್‌ಕಂಡತ್.

ಅಲ್ಲಿ ಬಸ್‌ಂದ ಇಳ್ದ ಕೆಲವುಜನ ಮೊದ್ಲ್ ಅಲ್ಲೆ ಬಸ್ ಸ್ಟ್ಯಾಂಡ್‌ನ ಒಳಗಡೆ ಇದ್ದ ಹೋಟೆಲ್‌ನ ಒಳಗಡೆಗೆ ಹೋದ್ರೊ. ಇವರ ಹಿಂದೆನೇ ಇನ್ನೂ ಸ್ವಲ್ಪ ಪ್ಯಾಸಂಜರ‍್ಸ್‌ಗ ಹೊಟ್ಟೆನ ಬಿಸಿ ಮಾಡಿಕಂಬಕೆ ಅಲ್ಲಿಗೆ ಬಂದ್ ಕುದ್ದ್‌ಕಂಡೊ. ಆದ್ರೇ ಈ ಕೃಷ್ಣವತಾರ ಸಿಂಗ್, ಡ್ರೈವರ್ ದಾಸ್, ದಫೇದಾರ ಭೀಮಯ್ಯ ಎಲ್ಲಾ ಬಂದ್ ಇವರ ಟೇಬಲ್ ಎದುರುಗಡೆನೇ ಬಂದ್ ಕುದ್ದ್‌ಕಂಡೋ. ಆಗ ಈ ರಾಜುಗೆ ಇವರ ಮುಖ ಪರಿಚಯ ಇದ್ದ್‌ದರಂದ ಅವರನ್ನೆಲ್ಲಾ ನೋಡಿ ನಗೆ ಆಡಿ ವಿಶ್ ಮಾಡ್ತ್. ಓ ಹಲೋ ನಾನ್ ಧರ್ಮಪಾಲ್‌ತ ಬೈಲ್‌ಕುಪ್ಪೆಲಿರುವ ಟಿಬೇಟ್‌ನಂವ. ಹಂಗೇ ನನ್ನ ಖಾಸಾ ದೋಸ್ತ್ ಮಿ. ರಾಜುನ ಮನೆ ಮದ್ವೆಗೆ ಹೊರೊಟೊಳೆತಾ ಹೇಳಿ ಅವರ ಒಬ್ಬೊಬ್ಬರ ಕೈ ಹಿಡ್ದ್ ಶೇಕ್ ಮಾಡ್ತ್. ಆಗ ಅವು ಕೂಡಾ ಓ ಹೌದಾ? ನಾವು ಕೂಡಾ ಮಿ. ರಾಜುನ ಮನೆಗೇ ಹೊರೊಟೊಳೊ. ನಮಿಗೆ ಕೂಡಾ ಅಂವ ತುಂಬಾ ಬೇಕಾದಂವ. ಹಂಗಾಗಿ ನಾವೆಲ್ಲಾ ಅಂವನ ತಂಗೆ

ಮದ್ಯೆಗೋಸ್ಕರ ಹೊರಟ್ ಬಂದೊಳೊ. ಈಗ ನೀವ್ ಸಿಕ್ಕಿದ್ದ್ ನಮಗೆ ತುಂಬಾ ಸಹಾಯಾದಂಗೆ ಆತ್. ಯಾಕೆತ್ತೇಳಿರೆ ನಿಮಿಗೆ ಅಂವನ ಮನೆ ಗುರ್ತು ಸರಿಯಾಗಿ ಗೊತ್ತುಟುಲ್ಲಾ? ತಾ ಹೇಳ್ದೋ. ಹಾಂ! ಹೌದು ಹೌದು. ನಾನ್ ಇಲ್ಲಿಂದ ಒಂದ್ ಕಾರ್ ಮಾಡಿ ಕಂಡ್ ಹೋನೆ. ಬೈ ದಿ ಬೈ ಸೀ ಮಿಸ್ ಶಾಂತಿ. ಇವಳು ನಮ್ಮ ಮಿ. ರಾಜುಗೆ ತುಂಬಾ ಹತ್ರದ ಸಂಬಂಧಿ. ನೀವು ಕೂಡಾ ಜೊತೆಗೆ ಬನ್ನಿ ಎಲ್ಲಾ ಒಟ್ಟಿಗೇ ಅಲ್ಲಿಗೆ ಹೋಕೆ ಅನುಕೂಲ ಆದೆತಾ ಹೇಳ್ತ್. ಅಷ್ಟೊತ್ತಿಗೆ ಅಲ್ಲಿ ಕುದ್ದಿದ್ದವಕೆಲ್ಲಾ ಬಿಸಿ ಬಿಸಿ ಕಾಫಿ ಬಾತ್ ಎಲ್ಲವೂ ಕಾಫಿ ಕುಡ್ದ್ ಮೇಲೆ ಎದ್ದೊ. ಅಲ್ಲಿಂದ ಸೀದಾ ಮೇಲೆ ಹತ್ತಿ ನಡ್ಕಂಡ್ ಬಂದ್ ಟ್ಯಾಕ್ಸಿ ಸ್ಟ್ಯಾಂಡ್‌ಗೆ ಬಂದೋ. ಅಲ್ಲಿಂದ ಒಂದ್ ಲಕ್ಷುರಿ ಎಂಬಾಸಿಡರ್‌ನ ಮಿ. ಧರ್ಮಪಾಲ್ ಹೈಯರಿಗೆ ತಕಂಡತ್. ಎಲ್ಲವೂ ಅದರಲ್ಲಿ ಕುದ್ದ್‌ಕಂಡೊ. ಅಲ್ಲಿಂದ ಅರ್ಧ ಗಂಟೆನೂ ಆತ್ಲೆ. ಅಷ್ಟೊತ್ತಿಗೆ ತಾಳೊತ್ತು ಮಾನಿ ಕೆಳಮನೆ ಬೋಪಜ್ಜನ ಮದ್ವೆ ಮನೆ ಗೇಟ್ ಹತ್ರ ಕಾರ್ ಬಂದ್ ನಿಂತಿತ್. ಕಾರ್‌ಂದ ಒಬ್ಬೊಬ್ಬನಾಗಿ ಕೆಳಗೆ ಇಳ್ದೋ. ಆಗ ಮಿ. ಧರ್ಮಪಾಲ್ ಹೇಳ್ತ್ ಕಾರ್ ಇಲ್ಲೆ ಇರ್‍ಲಿ. ನಮಿಗೆ ಬೇಕಾದೆ ಅದರ ಬಾಡಿಗೆ ಎಲ್ಲಾನೂ ನಾನೇ ಕೊಟ್ಟನೆ ತಾ ಹೇಳ್ತ್.

ಅಷ್ಟೊತ್ತಿಗೆ ಮಿ. ಮಹೇಂದ್ರಪಾಲ್ ಮತ್ತೆ ಬೋಪಜ್ಜ ಇನ್ನೂ ಮನೆ ಮಕ್ಕ ಎಲ್ಲಾ ಈ ಕಾರ್‌ನ ಹತ್ರಕೆ ಓಡಿಬಂದೊ. ಈ ಕಾರ್‌ಲಿ ನಮ್ಮ ಮಂಜ ರಾಜು ಬಂದಿರ್ದೊತಾ ಅವರ ಕಣ್ಣ್ ಆಶೆಲಿ ಹುಡ್‌ಕಾಡಿತಿತ್. ನನ್ ರಾಜು ಮಂಜ ಬಾತ್‌ನೇ ಮಕ್ಲೇ ತಾ ಕಣ್ಣ್‌ಲೇ ಸುತ್ತಾ ಹುಡ್‌ಕುತಾ ಅಲ್ಲಿ ನಿಂತಿದ್ದ ಹುಡುಗರ ಕೇಳ್ತ್. ಬಂದವರ ಮಧ್ಯೆ ತಮ್ಮ ರಾಜು ಮಂಜ ಇಲ್ಲೆಲ್ಲಾತಾ ಬಹಳ ನಿರಾಸೆಲಿ ಅವರ ಮುಖ ಬಾಡಿಹೋತ್ ಆದ್ರೂ ಈ ಬೇಜಾರ್ ಸಂಗತಿನ ಈಗ ತಾನೇ ಬಂದ್ ಇಳ್ದ ನೆಂಟ್ರುಗಳ ಮುಂದೆ ತೋರ್‍ಸಿಕಣದೆ ಬಂದವುಕೆಲ್ಲಾ ಕೈ ಮುಗ್ದ್ ನಮಸ್ಕಾರ ಮಾಡುತಾ ಬನ್ನಿ ಬನ್ನಿತ್ತೇಳಿ ತಮ್ಮ ಮುಖಲಿ ಬಲವಂತದ ನಗು ಮುಖನ ತೋರ್‍ಸಿಕಂಡ್ ಸ್ವಾಗತ ಮಾಡ್ದೊ. ಆದ್ರೆ ಸ್ನೇಹಿತ ಮಹೇಂದ್ರಪಾಲ್‌ಗೆ ಮಾತ್ರ ಈ ಬೋಳು ಮಂಡೆ ಬೌದ್ಧ ಸನ್ಯಾಸಿ ಗುರು ಮಿ. ರಾಜುನ ಗುರ್ತ್ ಸಿಕ್ಕಿಹೋತ್. ಅಂವಂಗೆ ಕಣ್ಣ್ ಹೊಡ್ದ್ ಶೇಖ್ ಹ್ಯಾಂಡ್ ಮಾಡಿ ಕೀಪ್‌ಇಟ್‌ಅಪ್ ತಾ ಹೇಳಿ ಕರ್ಕಂಡ್ ಬಂದಿದ್ದ ಶಾಂತಿ ಗೂಡೆಗ ನಮಸ್ತೆ ಮೇರಾ ಬಾಬಿಕೊತಾ ಕೈಮುಗ್ದ್ ನಮಸ್ಕಾರ್ ಮಾಡ್ತ್. ಕೂಡ್ಲೆ ಈ ಮೈಸೂರು ಫ್ರೆಂಡ್ಸ್‌ಗಳಿಗೆಲ್ಲಾ ವಿಶ್ ಮಾಡಿ ಶೇಖ್ ಹ್ಯಾಂಡ್ ಮಾಡಿ ಬನ್ನಿ ಬನ್ನಿ ನೀವೆಲ್ಲಾ ಬಂದದ್ ತುಂಬಾ ಸಂತೋಷತಾ ಅವರ ಬೆನ್ನ್ ತಟ್ಟಿಕಂಡ್ ಕರ್ಕಂಡ್ ಮುಂದೆ ಹೋತ್. ಆಗ ಈ ನೇಪಾಳಿ ಗುರು ಧರ್ಮಪಾಲ್ ಬೊಗ್ಗಿ ಬೋಪಜ್ಜನ ಕಾಲಿಗೆ ಬಿದ್ದ್ ನಮಸ್ಕಾರ ಮಾಡಿ ಆಮೇಲೆ ಅವರ ಕೆಮಿ ಹತ್ರ ಪಪ್ಪ ನಾನ್ ನಿನ್ನ ಮಂಜ ರಾಜು ಬಂದೊಳೆ. ನನ್ನ ಗುರ್ತ್‌ನ ಈಗ ಯಾರಿಗೂ ಹೇಳ್ಬೇಡ. ಈ ಗೂಡೆ ನಿನ್ನ ಸೊಸೆ ಆಗುವವಳುತ್ತಾ ಹೇಳ್ತ್. ಆಗ ಆ ಕುಂಟಿ ಗೂಡೆ ಅಪ್ಪನ ಕಾಲ್‌ನ ಮುಟ್ಟಿ ನಮಸ್ಕಾರ ಮಾಡ್ತ್ ನನ್ನ ಸೊಸೆ ಕೂಸ್ ನೀನ್ ಸುಮಂಗಲಿ ಆಗಿ ನೂರುವರ್ಷ ಚೆನ್ನಾಗಿರಮ್ಮತ್ತೇಳಿ ಆಶೀರ್ವದಿಸಿದೊ. ಅಲ್ಲಿಂದ ನೆಟ್ಟಂಗೆ ಧರ್ಮಪಾಲ್ ಜೊತೆಲಿ ಬಂದಿದ್ದ ಶಾಂತಿ ಗೂಡೆನ ಜೊತೆಲಿ ಅವಳು ತಂದಿದ್ದ ಬ್ರೀಫ್‌ಕೇಸ್‌ನ ಹಿಡ್ಕಂಡ್ ಕಯ್ಯಾಲೆ ದಾಟಿ ಬಾಡೆ ಒಳಗೆ ಹೋತ್. ಆಗ ಅಲ್ಲಿದ್ದ ನೆಂಟ್ರುಗ ಜನ ಎಲ್ಲಾ ಈ ಸ್ವಲ್ಪಕುಂಟಿ ಕಂಡ್ ನಡೆಯುವ ಈ ಗೂಡೆನೂ ಈ ಬೋಳುಮಂಡೆ ಟಿಬೇಟ್ ಹೈದನೂ ಒಳಗೆ ಬಾದುದರಕಂಡ್ ಕುತೂಹಲಂದ ನೋಡ್ತಿದ್ದೊ. ಈ ಧರ್ಮಸಿಂಗ್ ನೆಟ್ಟಂಗೆ ಹೋಗಿ ನೆಲ್ಲಕ್ಕಿ ಮುಂದೆ ನಿಂತ್ ಕಂಡತ್. ಆಗ ಅಲ್ಲಿಗೆ ಬಂದ ಅವ್ವ ಪೂವಮ್ಮನ ಪಾದನ ಮುಟ್ಟಿ ನಮಸ್ಕಾರ ಮಾಡಿ. ಅವ್ವ ನಿನ್ನ ಮಂಜ ರಾಜುನೇ ನಾನ್ ತಾ ಹೇಳ್ತ್. ಆಗ ಆ ಅವ್ವ ಈ ಮಂಜನ ಸ್ವರನ ಕೇಳಿ ಗುರ್ತ್ ಹಿಡ್ದ್ ಆಶ್ಚರ್ಯಲಿ ಈ ಮಂಜನ ಮುಖನ ಎರಡ್ ಕೈಯಿಂದ ಎತ್ತಿಹಿಡ್ದ್ ಈ ಬೋಳುಮಂಡೆ ವೇಷಧಾರಿನ ನೋಡಿ ನನ್ನ ಮಂಜ ರಾಜು ಬಂದ್ ಬುಟ್ಟವ್ವತಾ ಖುಷೀಲಿ ಕಿರುಚಿಕಂಡತ್. ಅವ್ವಾ ಜೋರಾಗಿ ಕಿರ್‍ಚುದು ಬೇಡ. ನನ್ನನ ತಂಗೆ ಸೋಭನ ಮದ್ವೆ ಕಳೆಯಕೆ ಮುಟ್ಟ ನಾನ್ ಹಿಂಗೇ ಇರೋಕು. ನೋಡಿಲ್ಲಿ ನನ್ನ ಜೊತೇಲಿ ನಿಂತಿರುವ ಈ ಗೂಡೆನೇ ನಿನ್ನ ಸೊಸೆ ಅವ್ವ. ಇವಳ ಬೇಗ ಒಳಗಡೆಗೆ ಕರ್ಕಂಡ್ ಸೋಭನ ಹತ್ರ ಬುಡುತಾ ಗುಟ್ಟ್‌ಲಿ ಅವ್ವನ ಕೆಮಿಹತ್ರ ಮೆಲ್ಲಂಗೆ ಹೇಳ್ತ್. ಆಗ ಅವ್ವ ತುಂಬಾ ಖುಷೀಲಿ ಬಾಯಿ ಬುಟ್ಟ್‌ಹೋಗಿತ್. ಆದ್ರೇ ಬಾಯಿ ಬುಟ್ಟ್ ಹೇಳ್ವಂಗಿಲ್ಲೆ.

ಅಲ್ಲಿಂದ ಶಾಂತಿ ಗೂಡೆನ ನಡ್ಸಿಕಂಡ್‌ತಂಗೆ ಶೋಭ ಗೂಡೆನ ಕೊಂಬರೆ ಒಳಗಡೆಗೆ ಹೋತ್. ಹೋದಂಗೆ ತಂಗೆ ಶೋಭನ ಹೆಗಲ್ ಮೇಲೆ ಕೈಹಾಕಿ ತಬ್ಬಿಹಿಡ್ದ್ ಅವಳ ಕಿವಿ ಹತ್ರ ಹೇಳ್ತ್. ಶೋಭ ನನ್ನ ತಂಗೆ. ನೋಡ್ ನಿನ್ನ ಅಣ್ಣಯ್ಯ ರಾಜು ನಾನ್ ನಿನ್ನ ಹತ್ರ ಪ್ರಾಮಿಸ್ ಮಾಡ್ದಂಗೆ ಎಲ್ಲನೂ ಸರಿಮಾಡಿ ಕಂಡ್ ಬಂದೊಳೆ. ಆದ್ರೇ ಈ ನನ್ನ ವೇಷ ಮಾತ್ರ ಈ ಮದ್ವೆ ಕಳೆಯಕೆ ಮುಟ್ಟಬೇಕಾದೆ. ನೋಡ್ ನನ್ನೊಟ್ಟಿಗೆ ನಿಂಗೆ ಅತ್ತಿಗೆ ಆಗುವವಳ ಕರ್ಕಂಡ್ ಬಂದೊಳೆ ಇವಳ ಹೆಸ್ರು ಶಾಂತಿ ತಾ ಇವಳಿಗೂ ನಿನ್ನೊಟ್ಟಿಗೆ ಮದ್ವೆ ಶೃಂಗಾರ ನೆಲ್ಲಾ ಮಾಡ್. ನಿನ್ನ ಧಾರೆ ಮುಹೂರ್ತದ ಒಟ್ಟಿಗೆ ನಾನ್ ಕೂಡಾ ಇವಳಿಗೆ ತಾಳಿ ಕಟ್ಟುವ ತೀರ್ಮಾನನ ಮಾಡಿಕಂಡೇ ಇವಳ ಇಲ್ಲಿಗೆ ಕರ್ಕಂಡ್ ಬಂದೊಳೆ. ಈಗ ಎಲ್ಲಾ ವಿಚಾರನೂ ಗುಟ್ಟಾಗಿಯೇ ನಡಿತ್ತಿದ್ದದೆ. ಆಮೇಲೆ ಎಲ್ಲಾ ನಿಂಗೇ ಗೊತ್ತಾದೆ ಧೈರ್ಯವಾಗಿರ್‌ತಾ ಬೆನ್ನ್ ತಟ್ಟಿ ಹೇಳ್ತ್. ತಂಗೆ ಶೋಭಂಗೆ ಅಣ್ಣನ ಈ ವೇಷನ ನೋಡಿ ಆಶ್ಚರ್ಯ ಆಗಿ ಹೋತ್. ಕರೆಕ್ಟಾಗಿ ಮದ್ವೆ ಮುಹೂರ್ತದ ಹೊತ್ತಿಗೆ ನನ್ನ ಅಣ್ಣಯ್ಯ ಮಾತ್ ಕೊಟ್ಟಂಗೆ ಬಂದ್ ತಲುಪಿತಲ್ಲಾ? ಇದೇನ್ ಆಶ್ಚರ್ಯ!! ಅಣ್ಣಯ್ಯನ ಈ ವೇಷನ ನೋಡಿರೆ ಮತ್ತೆ ಎಲ್ಲಾ ಗುಟ್ಟಾಗಿ ಇರೊಕುತ್ತೇಳ್ದರ ನೋಡಿರೆ ನನ್ನ ಅಣ್ಣಯ್ಯ ಏನೋ ಆಪತ್‌ನ ಸಂದಿಗ್ಧ ಪರಿಸ್ಥಿತಿಲಿ ಇರ್‍ವಂಗೆ ಕಂಡದೆ. ಈಗ ತನ್ನ ಪ್ರೀತಿನ ತೋರ್‍ಸಿಕಂಬಕ್ಕಾಗಲೀ ಪ್ರೀತಿಲಿ ಮಾತಡ್ಸಕ್ಕಾಗಲೀ ಅವಕಾಸನೇ ಇಲ್ಲದಂಗೆ ಆಗುಟಲ್ಲಾತಾ ಗ್ಯಾನ ಮಾಡಿಕಂಡ್, ಒಮ್ಮೆಗೆ ಹೆಚ್ಚ್ ಸಂತೋಷಲಿ ಹೆಚ್ಚ್ ದುಃಖಲಿ ಅಣ್ಣಯ್ಯತ್ತೇಳಿ ಕಿರುಚಿಕಂಡತ್. ಆಗ ಅಣ್ಣ ತಂಗೆನ ತುಟಿ ಮೇಲೆ ಬೆರಳ್‌ನ ಮಡ್ಗಿ. ನಿನ್ನ ಅತ್ತಿಗೆನ

ಒಳಗೆ ಕರ್ಕಂಡ್ ನಿನ್ನಿಷ್ಟದಂಗೆ ಶೃಂಗಾರ ಮಾಡ್‌ತ್ತೇಳಿ ಹೊರಗೆ ಹೊರಟ್.

ಆದ್ರೆ ಹೊರಗಡೆ ಕೈಯಾಲೆಕೊಂಬರೆ ಒಳಗೆ ವಿಶೇಷವಾಗಿ, ಕರೆಯದೇ ಇದ್ರೂನೂ ಕೂಡಾ ಈ ಸಮಾಜದ್ರೋಹಿ ವೈರಿಗ ರಾಜು ಮಂಜನ ಅಡ್ರಾಸ್‌ನ ಹುಡುಕಿ ಹಿಡ್ಕಂಡ್ ತಮ್ಮ ಸೇಡ್‌ನ ತೀರ್ಸಿಕಂಬಕ್ಕೋಸ್ಕರ ಈ ಮದ್ವೆ ಮನೇಲಿ ಅಂವ ಖಂಡಿತ ಸಿಕ್ಕೇ ಸಿಕ್ಕಿದೆತಾ ಪ್ಲಾನ್ ಮಾಡಿಕಂಡ್ ಎಲ್ಲಾ ಬಂದ್ ಸೇರಿಕಂಡಿದ್ದೊ. ಆದ್ರೇ ಈ ನಿಶ್ಸ್ವಾರ್ಥದ ಊರುನ ಜನ, ಮನ್ಸ್‌ಲಿ ಯಾವ ವಂಚನೆಗಳ ಕುಯುಕ್ತಿ ಇಲ್ಲದೇ ಇರ್‌ವಂತಹ ಈ ಸಾಧು ಜನ ಈಕ್ರೂರಿಗಳ ನಮ್ಮ ಮನೆಗೆ ಮಗಳ್ ಮದ್ವೆ ಸಮಾರಂಭಕ್ಕೋಸ್ಕರ ರಾಜು ಮಂಜನ ಸ್ನೇಹಿತರ್‌ಗ ತಾ ಹೇಳಿಕಂಡ್ ಬಂದಂತಹ ಈ ವಿಷ ಸರ್ಪಗಳಿಗೆ ಈ ಜನ ಕೊಟ್ಟಿರುವ ಭವ್ಯ ಸ್ವಾಗತನ ನೋಡಿ ಇವರ ಹೃದಯ ಶ್ರೀಮಂತಿಕೆನ ನೋಡಿ ಇವರ ಮಾನವೀಯತೆಗೆ ಕೊಡುತ್ತಿರುವ ಗೌರವನ ನೋಡಿ ಆಗಳೇ ಸ್ವಲ್ಪ ಜನ ಈ ಮುಗ್ಧರ ಭಾವನೆಗೆ ಸೋತ್ ತಲೆ ತಗ್ಗಿಸಿದ್ದೊ.

ಇವುತಮ್ಮ ಜೀವಮಾನಲೇ ಇದೇ ಮೊದಲನೇ ಬಾರಿಗೆ ಶುಭ ಸಮಾರಂಭಕ್ಕೆ ಬಂದಂತಹ ವೈರಿಗಳನ್ನು ಪ್ರೀತಿಸಿ ಅವಕೂ ಭವ್ಯ ಅತಿಥಿ ಸತ್ಕಾರನ ಮಾಡುದರ ನೋಡಿದ್ದದ್.

ಅಷ್ಟೊತ್ತಿಗೆ ಮಹೇಂದ್ರಪಾಲ್ ನಗೆ ಆಡಿಕಂಡ್ ಅಲ್ಲಿ ಅಹ್ವಾನಿತರಾಗಿ ಕುದ್ದಿದ್ದ ಗೆಸ್ಟ್‌ಗಳೊಟ್ಟಿಗೆ ತಾನೂ ಒಬ್ಬನಾಗಿ ಸೇರಿಕಂಡಂತ್. ಅಲ್ಲಿ ಒಬ್ಬೊರ ಕೈನ ಹಿಡ್ದ್ ಅವರ ಕೈನ ಕುಲುಕಿ ನಾನ್ ಧರ್ಮಪಾಲ್‌ತಾ ಮಿ. ರಾಜುನ ಬೆಸ್ಟ್‌ಫ್ರೆಂಡ್ ಇವು. ಮಿ. ಮಹೇಂದ್ರಪಾಲ್. ಮಿ. ರಾಜುನ ಕಾಲೇಜ್‌ಮೇಟ್. ಹಾಂ! ಹಾಂ! ಅಚ್ಚಾ. ನೀವು ಮಿ. ಕೃಷ್ಣಾವತಾರ್ ಸಿಂಗ್. ಬಾಂಬೆ ಗಾರ್ಮೆಂಟ್ಸ್‌ನ ಪ್ರೊಪರಾಯಿಟರ್‌ತಾ ಹೇಳಿ ಅವನ ಕೈನ ಹಿಡ್ದ್ ಕುಲ್‌ಕಿತ್. ಆಕೃಷ್ಣವತಾರ್‌ನ ಬೆರಳ್‌ಗ ಪುಡಿ ಪುಡಿ ಆಗುವಷ್ಟ್ ಬೇನೆ ಆಗಿ ಹೋತ್. ಆದ್ರೂ ತೋರ್ಸಿಕಣದೆ ಹುಳಿಹುಳಿ ನಗೆ ಆಡಿಕಂಡ್. ಹೌದು ಹೌದು ತಾ ಹೇಳ್ತ್. ಓ ಹಲೋ, ನೀವು ಮಹೇಶ್, ಕೂರ್ಗ್‌ಳಿ ರಸ್ತೆಲಿ ರಾತ್ರಿ ಒಳಗೆ ರೇಪ್ ಕೇಸ್‌ಲಿ ಏಟ್ ತಿಂದವುತಾ ಹೇಳಿ ಅವನ ಕೈನೂ ಹಿಡ್ದ್ ಅಮುಕಿತ್. ಎಸ್ ಎಸ್ ನೀವು ವುಲ್ಲಾಭಕ್ಷ್, ಕೊಲ್ಲಾಪುರದ ಪೈಲ್‌ವಾನ್‌ನ ಕಡೇವು ಮೈಸೂರು ಅಖಾಡಲಿ ಮಾತ್ರ ನಮ್ಮ ರಾಜುನ್ನೊಟ್ಟಿಗೆ ಸೋತವುತಾ ಹೇಳಿ ಅಂವಂಗೂ ಕೈಕೊಟ್ಟ್ ಬೆರಳ್‌ನ ಅಮ್ಕಿತ್. ಅಂವ ಆಗ ಕೈನ ಬುಡ್ಸಿಕಂಡ್ ಆಶ್ಚರ್ಯಲಿ ಹೀ ಹೀ ಹೌದುತಾ ಹೇಳ್ತ್. ಅಚ್ಚಾ ನೀವು ಹೆದ್ದಾರಿ ಮೆಲೆ ಲಾರಿ ಓಡ್ಸುವ ಹನೀಫ. ಕಳ್ಳಪರ್ಮಿಟ್‌ನ ಲೋಡ್‌ಗಳ ದಂಧೆ. ವೆರಿಗುಡ್ ನಿಮ್ಮದ್ ಕಳ್ಳಭಟ್ಟಿ ಮತ್ತೆ ಸೆಕೆಂಡ್ಸ್ ಸೇಲ್ಸ್‌ನ ಸಾಹುಕಾರ ಮಿ. ಹನೀಫ್‌ತಾ ಹೇಳಿ ಕೈನೀಡ್ತ್. ಓ ಅರೇ ನೀವು ಕಿಕ್ಕೇರಿ ಪೋಲೀಸ್ ಸ್ಟೇಷನ್ ದಫೇದಾರರ್ ಮಿ. ಭೀಮಯ್ಯ. ನೀವು ಕೂಡಾ ಮಿ. ರಾಜುನ ಹಿಡ್ಕಂಡ್ ಹೋಕೆ ಬಂದವಾ? ತಾಕೇಳ್ತ್. ಆಗ ಅವು ನೋ ನೋ ಮಿ. ರಾಜುಗೆ ಅಂವ ಅರಸಿಕೆರೆ ರೋಡ್‌ಲಿ ರಸ್ತೆದರೋಡೆಕೋರರ ಹೊಡ್ದ್ ಹಿಡ್ದ್ ಕೊಟ್ಟದಕ್ಕೋಸ್ಕರ ನಮ್ಮಗೃಹಖಾತೆಂದ ಶೌರ್ಯ ಪ್ರಶಸ್ತಿ ಕೊಟ್ಟದರ ಸ್ವೀಕರಿಸಿಕಂಬಕೆ ಆಮಂತ್ರಣನ ಕೊಡಿಕೆ ಬಂದಂವ ತಾ ಹೇಳ್ದೋ.

ಆಗ ಈ ಮಾತ್‌ನ ಕೇಳ್ದ ಅಲ್ಲಿದ್ದ ಆ ಎಂಟ್‌ಜನ ಕೇಡಿಗಳಿಗೊ ಅಬ್ಬಾ ಈಗಷ್ಟೇ ಚಿಗುರುಮೀಸೆ ಬಂದಿದ್ದ ಮಿ. ರಾಜುಗೆ ಶೌರ್ಯ ಪ್ರಶಸ್ತಿನಾ? ಅದೂ ರಸ್ತೆ ದರೋಡೆ ಮಾಡುವವರ ಹೊಡ್ದ್, ಹಿಡ್ದ್ ಪೋಲೀಸ್‌ಗಳಿಗೆ ಒಪ್ಪಿಸಿದವ ಈ ಘಟಂಗಾ ತಾ ಆಶ್ಚರ್ಯ ಪಡ್‌ತಿದ್ದೊ. ಅಲ್ದೆ ನಮ್ಮಂತಹ ಮೋಸಗಾರರ ಹೆಸ್ರ್‌ಗಳ, ಪರಿಚಯಗಳ ಹಿಡ್ದ್ ಈ ನೇಪಾಳಿ ಗುರು ಹೇಳ್ತಾ ಉಟ್ಟಲ್ಲಾ. ಎಲ್ಲೊ ನಾವೆಲ್ಲಾ ಅಪಾಯದ ಸುಳಿಒಳಗೆ ಬೀಳ್ವತರ ಕಾಣುತಾ ಉಟ್ಟಲ್ಲಾ?ತಾ ಗ್ಯಾನ ಮಾಡಿಕಂಡೊ ಯಾಕೋ ನಾವು ಇಲ್ಲಿ ಬಂದ್ ಈ ರಾಜುನ ಹೊಂಚ್ ಹಾಕಿ ಹಿಡಿಯಕೆ ಹೋದರೆ ತಿರುಗಿ ನಮಗೇ ಎಡವಟ್ಟು ಆಗಿ ಹೋದೋ ಏನೋ ತಾ ಗ್ಯಾನ ಮಾಡ್ವಂಗೆ ಆಗಿತ್. ಈ ಕೊಡಗ್‌ನ ಜನ ಮನ್ಸ್‌ರಿಗೆ ಮತ್ತೆ ನಿಯತ್ತಿಗೆ ಎಷ್ಟೊಂದ್ ಬೆಲೆ ಕೊಟ್ಟವೋ ಅಷ್ಟೆ ಕೆಟ್ಟವು ಇವು ನಿಯತ್ ತಪ್ಪಿದಂತಹ ನಮ್ಮಂತ ಜನರ ಹಿಡ್ದ್ ಕಾಲ್ ಕೈನ ಮುರ್ದ್ ಇಲ್ಲೇ ಕೂರ್ಸಿ ಬುಡ್ದೋತಾ ಗೇನ ಮಾಡಿಕಂಡರಿಕಾಕನ

ಮಿ. ಧರ್ಮಪಾಲ್ ಒಬ್ಬೊಬ್ಬರಿಗೂ ಒಂದೊಂದ್ ಕ್ಲಾಸಿಕ್ ಕಿಂಗ್ ಸಿಗರೇಟ್‌ನ ಆಫರ್ ಮಾಡಿ ಎಲ್ಲವಕೂ ತನ್ನ ಸಿಗಾರ್ ಲೈಟರ್‌ಂದ ಬೆಂಕಿ ಹತ್ತಿಸಿ ಕೊಟ್ಟ್ ಅಚ್ಚಾ ನನ್ನ ಫ್ರೆಂಡ್ ಮಿ. ರಾಜು ನನ್ನ ಹತ್ರ ಹೇಳಿಕಳ್ಸಿಟ್ಟು. ಇಲ್ಲಿಗೆ ನೀವೆಲ್ಲಾ ಬಂದೇ ಬಂದವೆತಾ ಹಂಗಾಗಿ ಆ ನನ್ನ ಫ್ರೆಂಡ್ ಪರವಾಗಿ ನಾನ್‌ನಿಮ್ಮನ್ನ ಫಸ್ಟ್‌ಕ್ಲಾಸ್ ಆಗಿ ನೋಡಿಕಂಡನೆ. ನಿಮಗೆ ಏನ್ ಬೇಕೋ ಕೇಳಿಕಣಿ. ಸಂಕೋಚ ಪಟ್ಟ್‌ಕಂಬದು ಬೇಡತ್ತೇಳ್ತ್. ಅಷ್ಟೊತ್ತಿಗೆ ಮಿ. ಮಹೇಂದ್ರ ಪಾಲ್ ಒಂದ್ ಪಚ್ಚೆ ತುಂಬಾ ಬಟ್ಲ್ ಹಿಟ್ಟ್‌ಕಡಿನ ಮತ್ತೆ ಹಂದಿಗೈಪು ಹುರ್ದದ್ ಚಿಕನ್ ಪ್ರೈಎರಡ್ ಟ್ರೇ ತುಂಬಾ ಇತ್ತ್. ಹಂಗೇ ಕುಡಿಯಕೆ ಓಲ್ಡ್ ಮಾಂಕ್ ಡ್ರಿಂಕ್ಸ್‌ನ ಹೊತ್ತ್‌ಕಂಡ್ ಬಂದ್ ಆ ಟೇಬಲ್ ಮೇಲೆ ಇಟ್ಟಿತ್. ಒಬ್ಬೊಬ್ಬಂಗೂ ಪೇಪರ್ ಪ್ರೆಸ್ ತಟ್ಟೆನ ಸಿಲ್ವರ್ ಬೇಗಟೆ ತಟ್ಟೆನಕೈಗೆ ಕೊಡ್ತ್. ಎಲ್ಲವಕೂ ಅಲ್ಲಿ ಬಫೆ ಸಿಸ್ಟಮ್ ಮತ್ತೆ ಕುಡಿಯಕೆ ಸಮೇತ ಅವುಕವುಕೆ ಎಷ್ಟಷ್ಟ್ ಬೇಕೋ ಅಷ್ಟ್‌ನ ಅವುಬಗ್ಗಿಸಿಕಂಡ್ ಕುಡಿಯಕೆ ಸುರುಮಾಡ್ದೊ.

ಈ ಮದ್ವೆಮನೆಲಿ ಹೊರಗಡೆಂದ ಬಂದ ಆಪ್ತರಲ್ಲದ, ಪರಿಚಯಸ್ತರಲ್ಲದ ಜನಕ್ಕೆ ಭೇದಭಾವ ತೋರ್ಸದೆ ಬೇರೆಯವಕ್ಕಿಂತ ಮೇಲಾಗಿಯೇ ಆದರ ಆತಿಥ್ಯನ ಮಾಡ್ದುರ ನೋಡಿ ನಮ್ಮಂತಹ ಕೇಡಿ ಜನರಿಗೆ ಇವು ಗೊತ್ತಿದ್ದೂ ಈ ವೈರಿಗಳಿಗೂ ಮನಃ ಪೂರ್ವಕವಾಗಿ ಆತಿಥ್ಯ ಸತ್ಕಾರ ಮಾಡಿವೆಲ್ಲಾ? ಇಲ್ಲಿನ ಜನ ಮನುಷ್ಯರಿಗೆ ಎಷ್ಟೊಂದ್ ಮರ್ಯಾದೆ ಬೆಲೆ ಕೊಟ್ಟ್‌ಕಂಡ್ ಎಷ್ಟೊಂದ್ ಪ್ರೀತಿಲಿ ಮಾತಾಡ್ಸಿವೆ ತಾ ಗ್ಯಾನ ಮಾಡಿಕಂಡ್ ಆ ಬೆಳಗಿನ ಹಿತವಾದ ಚಳಿಯ ವಾತವರಣ್‌ಲಿ ಮೈ ಬೆಚ್ಚಂಗೆ ಒಂದೊಂದೇ ಶಿಫ್ ವಿಸ್ಕಿನ ಹೀರುತ್ತಿದ್ದೊ. ಹಂಗೇ ಒಂದ್ ಕೈಲಿ ಹಂದಿ ಗೈಪ್ ಬಟ್ಲ್ ಹಿಟ್ಟ್‌ನ ಹೊಟ್ಟೆಗೆ ಸೇರ್ಸ್‌ತಿದ್ದರೆ ಇನ್ನೊಂದ್ ಕೈಲಿ ಸಿಗರೇಟ್‌ಂದ ಹೊಗೆ ಬುಟ್ಟ್‌ಕಂಡ್ ಅರ್ಧ ಅರ್ಧ ಪೆಗ್ ತಾ ಗ್ಲಾಸಿಗೆ ಬಗ್ಗ್‌ಸಿ ಕಂಡ್ ಕುಡಿತಿದ್ದೊ. ಆಗ ಹಂಗೇ ಮಿ. ರಾಜುನ ವಿಚಾರನ ಒಬ್ಬೊಬ್ಬ ಒಂದೊಂದ್ ತರಲಿ ಗಂಭೀರ್ಯ ಆಗಿ ಚರ್ಚೆ ಮಾಡಿಕೆ ಶುರುಮಾಡಿಕಂಡೊ.

(ಮುಂದ್‌ವರ್ದದೆ)

# ಬ್ಯಾಟೆ

ನಂಗೆ ಬ್ಯಾಟೆಗೆ ಹೋಕು, ಒಳಿ ಕೂರೊಕುತೇಳಿ ಭಾರೀ ಆಸೆ. ಆದರೆ, ಆ ಆಸೆ ಎಲ್ಲಾ ಹಗಲ್ ಮಾತ್ರ. ಕತ್ತಲಾಕನ ಆ ಆಸೆಯೆಲ್ಲಾ ಟುಸ್ಸ ಆದೆ. ಹಗಲ್ ಬ್ಯಾಟೆಯ ಕನಸು ಕಂಡ್ ರಾತ್ರಿ ಆಕನ ಇಲ್ಲದ ಕೊಲೆ [ದೆವ್ವ], ಬೀರಗಳ ಗ್ಯಾನ ಬಂದದೆ. ಹಂಗಾಗಿ ನಾನ್ ಬ್ಯಾಟೆಗೆ ಹೋಗುವ ಕನ್ಸ್ ಹಂಗೆ ಉಳ್ತು.

ಹಿಂಗೆ ಇರ್‌ಕಾಕನ ನನ್ನ ಪಿ.ಯು.ಸಿ. ಪರೀಕ್ಷೆಗ ಮುಗ್ದು ಬ್ಯಾಸ್ಗೆ ರಜ ಸುರಾತ್. ರಜೆಲಿ ನಾನ್ ಸಣ್ಣಪನ ಮನೆಗೆ ಹೋದೆ. ಅಲ್ಲಿ ಹೋಗಿ 2-3 ದಿನ ಕಳ್ತ್. ಒಂದಿನ ಸಾಯಂಕಾಲ ಸಣ್ಣಪ ಮನೆಗೆ ಬಾಕನ ಕತ್ತಲೆ ಆಗಿತ್ತ್. ಸ್ವಲ್ಪ ಎಣ್ಣೆನೂ ಹಾಕಿತ್ ಕಂಡದೆ. ಮನೆಗೆ ಬಂದ್ ಸ್ವಲ್ಪ ಹೊತ್ ಆಕನ ಕೋವಿನ ತೆಗೆ ಮತ್ತೆ ಅದ್ರ ಧೂಳ್‌ನೆಲ್ಲಾ ಒಮ್ಮೆ ಲಾಯ್ಕ ಒರ್‌ಸಿತ್. ಹೆಡ್‌ಲೈಟಿಗೆ ಹೊಸ ಬ್ಯಾಟ್ರಿ ಎಲ್ಲಾ ಹಾಕಿತ್. ಆಗ ನಂಗೆ ಅರ್ಥ ಆತ್, ಎಲ್ಲೊ ಬ್ಯಾಟೆಗೆ ಹೊರ್‌ಟೊಳೊತ. ನಂಗೆ ಬ್ಯಾಟೆಗೆ ಹೊಕುತ ಆಸೆ ಪುನಃ ಸುರಾತ್. ಮೆಲ್ಲೆ ಹೋಗಿ ಸಣಪಂಗೆ ಹೇಳ್ದೆ. ಒಂದ್ ಹಳೆ ಪ್ಯಾಂಟ್, ಒಂದ್ ಕೋಟ್, ಕಾಲಿಗೆ ಗಂಬೂಟ್ ಸೂ, ತಲೆಗೊಂದ್ ಟೊಪ್ಪಿ ಎಲ್ಲಾ ಕೋಸಿಕಂಡೆ. ಹೊರಗೆ ಬಂದ್ ನೋಡ್ರೆ ಕರಿ ಕತ್ತಲೆ. ನಂಗೆ ಪುಕ್ಕುಲು ಸುರಾತ್. ಅಂತೂ ಏನಾದ್ರೂ ಆಗಲಿ ತೇಳಿ ಹೊರ್‌ಟೋ.

ಮನೆ ಬುಡ್‌ಕಾಕನ ಎಲ್ಲಾ ದೇವುಗಳನ್ನ ಒಮ್ಮೆ ಗ್ಯಾನ ಮಾಡಿಕಂಡೆ. ಮನೇಂದ ಸ್ವಲ್ಪ ದೂರ ಹೋಕಾಕನ, ಹಿಂದೆಂದ ಎಂತೋ ಓಡಿ ಬಂದಂಗೆ ಆತ. ನಾನ್ ಹೆದ್ರಿ ಒಮ್ಮೆ ಕಿರ್ಚಿ ಬುಟ್ಟೆ. ಟಾರ್ಚ್ ಹಾಕಿ ನೋಡ್ರೆ ನಮ್ಮ ಟೈಗರ್ ನಾಯಿ. ಅದ್ಕೆ ಸ ಭಾರಿ ಬ್ಯಾಟೆ ಹುಚ್ಚು. ಕೋವಿ ರೆಡಿ ಮಾಡ್ರೆ ಸಾಕ್. ಅದ್ಕೆ ಏನ್ ಕುಸಿ ಗೊತ್ತ. ಬಾಲ ಎಲ್ಲ ಬೀಸಿಕಂಡ್, ಅತ್ತ-ಇತ್ತ ಓಡಾಡಿಕೆ ಸುರು ಮಾಡ್ದೆ. ಅದರ್‌ದೇ ಒಂದ್ ತಮಾಸೆ. ನಾನ್ ಕಿರ್ಚಿದ್ ಕೇಳಿ ಸಣ್ಣಪ ಇನ್ನೊಂದ್ ಸಲ ಕಿರ್ಚಿರೆ, ನಿನ್ನ ಬುಟ್‌ಹೋನೆತ್ತೇಳಿ ಹೇಳ್ತ್. ನಾನ್ ಇನ್ನ್ ಕಿರ್ಚುಲೆತೇಳಿ ಹೊರ್ಟೆ.

ದಾರಿಲಿ ಹೋಕಾಕನ ತಿಂಗಳ ಬೆಳ್ಕಿಗೆ ಮರಗ ಎಲ್ಲಾ ಕೊಲೆಗಳಂಗೆ ಕಂಡವೆ. ಗುಮ್ಮ ಬ್ಯಾರೆ ಊಂ ಊಂ ಊಂ.... ತೇಳಿ ಮರ್‌ಡತ್ತಿತ್. ನಾನ್ ಅತ್ತ-ಇತ್ತ ನೋಡ್ರೆ ಹೆದ್ರಿಕೆ ಆದೆತೇಳಿ ದಾರಿ ಮಾತ್ರ ನೋಡಿಕಂಡ್ ನಡ್ದೆ. ಸ್ವಲ್ಪ ದೂರ ಹೋಕಾಕನ ಒಂದ್‌ಗೋಳಿ ಮರ ಸಿಕ್ಕಿತ್. ಅದ್ಕೆ ಸಣ್ಣಪ ಲೈಟ್ ಬುಟ್ಟತ್. ಲೈಟ್ ಬುಡ್‌ಕಾಕನ ದೊಡ್ಡ-ದೊಡ್ಡ ಬಾವಲಿಗ ತೀರ ಹಾರಿ ಹೋದೋ. ಸಣ್ಣವು ಮಾತ್ರ ಚಿರಿ-ಪಿರಿ ತೇಳಿಕಂಡ್ ಗೋಳಿ ಹಣ್ಣ್ ತಿಂಬತಿದ್ದೋ. ಈ ಬಾವಲಿಗಳ ಬಾಯ್ಗೆ ಮಣ್ಣ್ ಬೀಳತ್ತೇಳಿ ಬೈಕಂಡ್ ಮುಂದೆ ಹೊರಟೋ. ಮುಂದೆ ಸುಮಾರು ದೂರ ಹೋಕಾಕನ ಒಂದ್ ದೂಪದ ಕಾಯಿ ಮರ ಸಿಕ್ಕಿತ್. ದೂಪದ ಕಾಯಿ ಮರದ ಆಚೆ ಬರಿಲಿ ಒಂದ್ ದೊಡ್ಡ ಗೋಳಿ ಮರ. ದೊಡ್ಡದ್ ತೇಳ್‌ರೆ ಸರಿಯಾದದೆ. ಅದರ್‌ನ ಯಾವ ಕಡೆಂದ ನೋಡ್ರು ಅದ್ರ ತುದಿ ಕಾಂಬಲೆ. ಈ ಸಲ ಸದ್ದ್ ಮಾಡದೆ ಮೆಲ್ಲೆ ಹೋಗಿ ಲೈಟ್ ಬುಟ್ಯೊ. ಆ ಲೈಟ್ ಬೆಳಕಲಿ 2 ಕಣ್ಣುಗ ಪಿಳಿ ಪಿಳಿ ಹೊಳ್ದವೆ. ಸಣ್ಣಪ ಮೆಲ್ಲೆ ಕೋವಿ ಎತ್ತಿ ಡಬ್ಬು ತೇಳಿ ಮಡ್‌ಗಿತ್. ಸ್ವಲ್ಪ ಹೊತ್ ಮರಲಿ ಎಂತೋ ಪರ-ಪರ ತೇಳಿ ಒದ್ದಾಡ್ತ್. ಮತ್ತೆ ಕೆಳಗೆ ಬಿತ್. ಹೋಗಿ ನೋಡ್‌ಕಾಕನ ಒಂದು ಪಾಂಜ ಬಿದ್ದಿತ್. ಪಾಂಜ ತೇಳ್‌ರೆ ಹಾರ್‍ವ ಬೆಕ್ಕ್. ಸಣಪ ಎತ್ತಿ ನೋಡಿ ಪರೊಲ್ಲರ ಒಳ್ಳ ತೂಕ ಉಟ್ಟುತ ಹೇಳ್ತ್. ಮತ್ತೆ ಅದ್ರ ಎತ್ತಿಕಂಡ್ ಮನೆಗೆ ಹೋದೋ.

ನಂಗೆ ಈಗ ಒಂದು ಬ್ಯಾಟೆಗೆ ಹೋದ Experiance ಆತ್. ಇದಾಗಿ ಒಂದ್ ವಾರ ಕಳ್ತ್. ಆಮೇಲೆ ನಾನ್ ಒಮ್ಮೆ ದೇವ್ರ ಕಾಡಿಗೆ ಹೋಗಿ ಬಾಕನ ಒಂದ್ ಜಾಗಲಿ ಮೊಲಗ ಸಕತ್ ಲದ್ದಿ ಹಾಕಿದ್ದೋ. ಅದನ್ನ ನಾನ್ ಬಂದ್ ಸಣ್ಣಪಂಗೆ ಹೇಳ್ದೆ. ಸಣ್ಣಪ ಬಾ ಆ ಜಾಗ ತೋರ್ಸು ತೇಳಿ ಕರ್‌ಕಂಡ್ ಹೋತ್. ಅಲ್ಲಿ ಮೊಲದ ಲದ್ದಿ ನೋಡಿ, ಉಂಡೆ ಬಾರಿ ದಪ್ಪಲಿ ಹಾಕುಟ್ಟುರಾ, ಮೊಲ ಸರಿಯಾಗಿ ಇರ್ದು, ಇಂದು ರಾತ್ರಿ ಬಂದು ಒಳಿ ಕೂರ್‌ನೊ ತೇಳಿ ಹೇಳ್ತ್.

ಕತ್ತಲೆ-ಕತ್ತಲೆ ಆಕಾಕನ ನಾನ್ ಸಣಪನು ಒಳಿ ಕೂರಿಕೆ ಹೊರ್‍ಟೊ. ಮೊಲ ಮೇಯುವ ಜಾಗಲಿ ಒಂದ್ ಮರ ಹತ್ತಿ ಕುದ್ದೋ. ನಾವು 7 ಗಂಟೆಗೆ ಒಳಿ ಕುದ್ದೊವು. ಗಂಟೆ ಏಳುವರೆ ಆತ್, 8 ಆತ್ ಆದ್ರೂ ಮೊಲ ಪತ್ತೇಲೆ. ಮರದ ಕೆಳಗೆ ಎಂತೋ ಚರ-ಪರ ತೇಳ್‌ತಿತ್. ನಂಗೆ ಮೈ-ಕೈ ನಡಗಿಕೆ ಸುರಾತ್. ಆಗ ಸಣ್ಣಪ ಹೇಳ್ತ್, ಅವು ಇಲಿಗರಾ, ಸುಮ್ಮನಾರ್ ಹೆದ್ರಿಕಂಡ್ ಕಿರ್ಚಿ-ಗಿರ್ಚಿ ಬುಡ್‌ಬಡಾತ ಹೇಳ್ತ್. ಗಂಟೆ ಒಂಬತ್-ಒಂಬತ್‌ಕಾಲ್ ಆಕನ ಎಂತೋ ಬಿಳಿ-ಬಿಳೀದ್ ಹಾರಿಕಂಡ್-ಹಾರಿಕಂಡ್ ಬಂದಂಗೆ ಆತ್. ಒಂದ್‌ಸಲ ಹುಲ್ಲು ತಿಂಬೊದು, ಮತ್ತೆ ಗಿಡದ ಮರೆಲಿ ಅಣ್‌ಗುದ್ ಮಾಡ್ತಿತ್. ಸೊಳ್ಳೆಗೆ ಬ್ಯಾರೆ ಸಖಿತ್ ಕಚ್ಚ್‌ತ್ತಿದ್ದೋ. ಸೊಳ್ಳೆ ಕಚ್ಚ್‌ದ ಜಾಗನ ತೂರ್ಸಿಕಾಕನ, ಸಣ್ಣಪ ಬ್ಯಾರೆ ಬೈಯತಿತ್. ಆ ಬಿಳಿ-ಬಿಳಿ ಕಾಂಬತ್ತಿದ್ದ್ ಮೊಲ ಕಂಡದೆ. ಅದ್ ಬಂದ್ ಬಂದ್ ಸಣ್ಣ ಗಿಡದ ಸೆರೇಲಿ ಅಣ್‌ಗಿತ್. ಸಣ್ಣಪ ಮೆಲ್ಲೆ ಕೋವಿ ತೆಗ್ತ್, ಆಗ ಆ ಮೊಲ, ಗಿಡದ ಮರೆಂದ ಹೊರಗೆ ಬಂದ್ ಮೇಯತಿತ್. ಸಣ್ಣಪ ಟ್ರಿಗ್ಗರ್ ಒತ್ತಿತ್. ಸದ್ದ್ ಇಲ್ಲದೆ ಮಲ್‌ಗಿದ್ದ ಆ ದೇವ್ರ ಕಾಡ್‌ಲಿ ಡುಂಡಿನ ಸದ್ ಅಲೆ-ಅಲೆಯಾಗಿ ಪ್ರತಿಧ್ವನಿಸ್‌ತಿತ್. ಮರಂದ ಇಳ್ದ್ ನೋಡ್‌ಕಾಕನ ಮೊಲ ಗಿಡದ ಬುಡಲಿ ಸತ್‌ಬಿದ್ದಿತ್. ಅದ್ರ ಕಂಡ್ ನಂಗೆ ಪಾಪತ ಆತ್. ಆದ್ರೆ ನಾನ್ ಬ್ಯಾಟೆಗೆ ಹೋಕುತ ಇದ್ದ ನನ್ನ ಕನ್‌ಸ್ ನನ್‌ಸಾಗಿತ್. ಪ್ರಾಣಿ ಹಿಂಸೆ ಹೋಕುತ ಇದ್ದ ನನ್ನ ಕನ್ಸ್ ನನ್‌ಸಾಗಿತ್. ಪ್ರಾಣಿ ಹಿಂಸೆ ಮಾಡಿಕಾಗದ್‌ತ ಗ್ಯಾನ ಬಾತ್. ಅಂದ್‌ದ ಮತ್ತೆ ಬ್ಯಾಟೆಗೆ ಹೋತ್‌ಲ್ಲೆ ನಾನ್.

– ಮೆರಕಜೆ ತೀರ್ಥಪ್ರಸಾದ್
ಗೌಡ ಹಾಸ್ಟೆಲ್, ಮೈಸೂರು

# ಕೊಡಗು ಗೌಡ ಮಾಜಿ ಸೈನಿಕರ ಸಹಕಾರ ಸಂಘ, ಮೈಸೂರು

ಮೈಸೂರಿನಲ್ಲಿ ಸ್ಥಾಪಿತವಾಗಿರುವ ಕೊಡಗು ಗೌಡ ಮಾಜಿ ಸೈನಿಕರ ಸಹಕಾರ ಸಂಘದ ವಾರ್ಷಿಕ ಮಹಾಸಭೆಯು ಮೈಸೂರಿನಲ್ಲಿರುವ ಗೌಡ ವಿದ್ಯಾರ್ಥಿ ನಿಲಯದಲ್ಲಿ ದಿನಾಂಕ 28-7-2001ರಲ್ಲಿ ಬಹಳ ವಿಜೃಂಭಣೆಯಿಂದ ನಡೆಯಿತು.

ಸಂಘದ ಹಾಲಿ ಅಧ್ಯಕ್ಷರಾದ ಶ್ರೀ ತಡಿಯಪನ ಕುಮಾರ್ ಜಯನವರ ನೇತೃತ್ವದಲ್ಲಿ ಸಭೆಯು 10-50ಕ್ಕೆ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯ್ತು. ತದ ನಂತರ ನೆರೆದವರನ್ನು ಕಾರ್ಯದರ್ಶಿ ಶ್ರೀ ಕರ್ಣಯ್ಯನ ಲಕ್ಷ್ಮಣ್‌ನವರು ಸಾಂಪ್ರದಾಯಿಕವಾಗಿ ಸ್ವಾಗತಿಸಿದರು. ಸಭೆಯು ಇತರ ವಿಷಯಗಳಲ್ಲಿ ಚರ್ಚಿಸಿತು. ಸಭೆಯಲ್ಲಿ ಪಟ್ಟಡ ಪ್ರಭಾಕರ್, ಮೇರ್ಕಜೆ ವಿಶ್ವನಾಥ್, ಮಾಡಯ್ಯನ ಮಾಚಯ್ಯ, ಚಟ್ಟಿಮಾಡ ಜನಾರ್ಧನನವರುಗಳು ಮಾತನಾಡಿದರು. ಹಾಗೂ ಹಲವಾರು ಮಂದಿ ಸಲಹೆ ಸೂಚನೆ ನೀಡಿದರು.

ಹಾಗೂ ನೂತನವಾಗಿ ಹನ್ನೊಂದು ಮಂದಿಯ ಕಾರ್ಯಕಾರಿ ಮಂಡಳಿಯ ಸದಸ್ಯರನ್ನಾಗಿ ಶ್ರೀಯುತ ಕೊಡಲಿಂಗನ ಮೇದಪ್ಪ, ಕೊಂಬಂಡ ಭೀಮಯ್ಯ, ತಡಿಯಪ್ಪನ ಜನಾರ್ಧನ, ಕರ್ಣಯ್ಯನ ಮನೋಹರ್, ಚೆಟ್ಟಿಮಾಡ ಜನಾರ್ಧನ, ಕೊಂಬಾರನ ಸುಬ್ಬಯ್ಯ, ಕರ್ಣಯ್ಯನ ಮುದ್ದಯ್ಯ, ಮೇರ್‌ಕಜ್ಜೆ ವಿಶ್ವನಾಥ, ಕರಣಯ್ಯನ ಲಕ್ಷ್ಮಣ, ಕುಯ್ಯಮಂಡಿ ರಾಮಪ್ಪ ಮತ್ತು ತಡಿಯಪ್ಪನ ಕುಮಾರ್‌ಜಯ ಇವರುಗಳು ಆಯ್ಕೆಯಾದರು. ಅಲ್ಲದೆ ಸಂಘದ ಸಲಹೆಗಾರರಾಗಿ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಶ್ರೀ ಪಟ್ಟಡ ಪ್ರಭಾಕರ್‌ರವರನ್ನು ಸರ್ವಾನುಮತದಿಂದ ಆರಿಸಲಾಯ್ತು.

ಇಷ್ಟಲ್ಲದೆ ಕಾರ್ಯಕಾರಿ ಮಂಡಳಿಗೆ ಯಾವುದೇ ಎಡರು ತೊಡರುಗಳು ಎದುರಾಗದಂತೆ ಸರಾಗವಾಗಿ ನಡೆಯುವ ಸಲುವಾಗಿ ನಿರ್ದೇಶಕರಿಗೆ ಸಹಾಯಕರಾಗಿ ಆಯಾಯಾ ಏರಿಯಾಗಳಿಂದ ಸಕ್ರೀಯ ಕಾರ್ಯಕರ್ತರಾಗಿ ಕೆಲವರನ್ನು ಆಯ್ಕೆ ಮಾಡಲಾಯ್ತು. ಹಿನಕಲ್, ಹೂಟಗಳ್ಳಿ ವಿಭಾಗದಿಂದ ಶ್ರೀ ತುಂತಜ್ಜೆ ಉಲ್ಲಾಸ್ ರವನ್ನು, ಸಿದ್ಧಾರ್ಥನಗರದಿಂದ ಮಾಡೇಯನ ಮಾಚಯ್ಯನವರನ್ನೂ, ವಿವೇಕಾನಂದನಗರದಿಂದ ಶ್ರೀ ತುಂತಜ್ಜೆ ಗಣೇಶರವರನ್ನು; ಕುವೆಂಪುನಗರದಿಂದ ಶ್ರೀ ಸಿದ್ದೇಟಿ ಪುಟ್ಟಯ್ಯನವರನ್ನು, ಹೆಬ್ಬಾಳ್ ಏರಿಯಾಕ್ಕೆ ಶ್ರೀ ಮೊಟ್ಟನ ಜೋಯಪ್ಪನವರನ್ನು, ಗೋಕುಲರಿನಿಂದ ಪಾರೆಮಜಲು ಬಸಪ್ಪನವರನ್ನು ಮತ್ತು ಹುಣಸೂರು ಏರಿಯಾದಿಂದ ಶ್ರೀ ಕೊಂಬಂಡ ಬಿದ್ದಪ್ಪನವರನ್ನು ಸರ್ವಾನುಮತದಿಂದ ಆರಿಸಲಾಯ್ತು.

ಮಾಜಿ ಸೈನಿಕರ ಸಂಘವು ನಡೆದು ಬಂದ ಹಾದಿಯನ್ನು ವಿಶ್ಲೇಷಿಸುತ್ತಾ ಅದರ ಬಗ್ಗೆ ಚರ್ಚಿಸಲಾಯ್ತು. ಸಧ್ಯಕ್ಕೆ ನಿರ್ದೇಶಕರು ತಮ್ಮ ತಮ್ಮ ಊರಿನಲ್ಲಿರುವ ಮಾಜಿ ಸೈನಿಕರನ್ನು ಈ ಸಹಕಾರ ಸಂಘಕ್ಕೆ ನೊಂದಾಯಿಸುವಂತೆ ಸೂಚಿಸಿತು. ಮುಂಬರುವ ದೀಪಾವಳಿ ಹಾಗೂ ಹುತ್ರಿ ಸಮಾರಂಭಗಳಿಗೆ ಪಟಾಕಿಯನ್ನು ಶಿವಕಾಶಿಯಿಂದ ತಂದು ಹಂಚುವ ತೀರ್ಮಾನವನ್ನು ಕೈಗೊಳ್ಳಲಾಯ್ತು. ಇದರ ಉಸ್ತುವಾರಿಯನ್ನು ಶ್ರೀ ಕೊಂಬನ ಭೀಮಯ್ಯ ಹಾಗೂ ಕರ್ಣಯ್ಯನ ಮನೋಜಕುಮಾರ್‌ರವರಿಗೆ ವಹಿಸಲಾಯ್ತು. ಸಭೆಯಲ್ಲಿ ಸಂಘದ ಉಪಾಧ್ಯಕ್ಷರಾದ ಕುಯ್ಯಮುಡಿ ರಾಮಪ್ಪ ನವರು ಸಂಘದ ಬೈಲಾವನ್ನು ಓದಿ ವಿವರಿಸಿದರು.

ಕೊನೆಯದಾಗಿ ಸಂಘದ ಹಾಲಿ ಅಧ್ಯಕ್ಷರಾದ ತಡಿಯಪ್ಪನ ಕುಮಾರ್ ಜಯನವರು ಮಾತನಾಡುತಾ ನನಗೆ ಸಿಕ್ಕಿದ ಈ ಒಂದು ವರ್ಷದ ಅವಧಿಯಲ್ಲಿ ನಾನು ಮಾಡಿದ ಕೆಲಸ ಏನೇನೂ ಸಾಲದು. ಆದರೂ ಸಾಧ್ಯವಾದಷ್ಟು ಪ್ರಯತ್ನಿಸಿ ಮೈಸೂರಿನ ಕಲಾ ಮಂದಿರದಲ್ಲಿ ಸಂಘಟನೆ, ಭಾಷೆ, ಸಂಸ್ಕೃತಿಯ ಬಗ್ಗೆ ಕಾರ್ಯಕ್ರಮ ಹಾಕಿಕೊಳ್ಳಲಾಗಿ ಈ ಬಗ್ಗೆ ಸಂಘದ ಖಾತೆಯಲ್ಲಿ 33840/- ರೂಪಾಯಿ ಉಳಿಸಿದ್ದೆ ದೊಡ್ಡ ಸವಾಲಿನ ಕೆಲಸವೆಂದು ಹೇಳಿದರು. ಮಾಜಿ ಸೈನಿಕರ ಸ್ಥಿರ ನಿಲುವಿಗಾಗಿ ಮೈಸೂರಿನಲ್ಲಿ ಮಾಜಿ ಸೈನಿಕರಿಗೆ ಒಂದು ನಿವೇಶನದ ಅವಶ್ಯಕತೆ ಬಗ್ಗೆ ಮಾತನಾಡುತಾ ಅದಕ್ಕಾಗಿ ನಾವುಗಳು ನಮ್ಮ ಇರುವಿಕೆಯನ್ನು ಗುರುತಿಸಲು ಪ್ರಯತ್ನಿಸ ಬೇಕೆಂದು ಸೇರಿದ ಮಾಜಿ ಸೈನಿಕರಲ್ಲಿ ವಿನಂತಿಸಿದರು.

ಸಂಘದ ಎಲ್ಲಾ ಚಟುವಟಿಕೆಗಳು ಅರೆ ಭಾಷೆಯಲ್ಲೇ ನಡೆದವು. ಸಂಘದ ಉಪಾಧ್ಯಕ್ಷರಾದ ಶ್ರೀ ಕುಯ್ಯಮುಡಿ ರಾಮಪ್ಪ ನವರು ಸೇರದ ಮಾಜಿ ಸೈನಿಕರುಗಳಿಗೆ ವಂದನಾರ್ಪಣೆಯನ್ನು ಸಲ್ಲಿಸಿದರು. ಮಧ್ಯಾಹ್ನಕ್ಕೆ ಸರಳ ರೀತಿಯ ಭೋಜನವಿತ್ತು.

ದಿನಾಂಕ 10-8-2001ರಂದು ನಡೆದ ಕಾರ್ಯಕಾರಿ ಮಂಡಳಿಯ ಸಭೆಯಲ್ಲಿ ಶ್ರೀ ತಡಿಯಪ್ಪನ ಕುಮಾರ್‌ಜಯರವರನ್ನು ಅಧ್ಯಕ್ಷರನ್ನಾಗಿಯೂ ಕೊಂಬನ ಭೀಮಯ್ಯನವರನ್ನೂ ಕಾರ್ಯದರ್ಶಿಯಾಗಿಯೂ ಚೆಟ್ಟಿಮಾಡ ಜನಾರ್ಧನರವನ್ನು ಖಜಾಂಚಿಯಾಗಿಯೂ ಮತ್ತು ಕುಯ್ಯಮುಡಿ ರಾಮಪ್ಪನವರನ್ನು ಉಪಾಧ್ಯಕ್ಷರನ್ನಾಗಿಯೂ ಮುಂದಿನ ಸಾಲಿಗೆ ಆರಿಸಲಾಯ್ತು.

ವರದಿ : **ಕೊಡಗು ಸಂಗಾತಿ**

---

## ಉಪ್ಪಿನ್ ಕಾಯಿಯ ಕವನ

ಉಪ್ಪಿನ್ ಕಾಯಿ ಕವನ ಕೇಳಿ ಬಹುರುಚಿ
ತಪ್ಪದೇ ನೀವು ತಿಂದು ನೋಡಿ ಅದ ರುಚಿ
ಮಾವಿನಕಾಯಿ ಅಂಬಟೆ ಕಾಯಿ ನಿಂಬೆಕಾಯಿ
ತಾವು ತಂದು ಹಾಕಬೇಕ್ರಿ ಉಪ್ಪಿನ್ ಕಾಯಿ
ಉಪ್ಪು ಖಾರ ಹಾಕಬೇಕ್ರಿ ಉಪ್ಪಿನ್ ಕಾಯಿ
ಬಾಯಿ ಕಟ್ಟಿ ಬೆಚ್ಚಗಾಗಿ ಇಡಬೇಕ್ರಿ.
ರಸ ಬಿಟ್ಟ ಉಪ್ಪಿನ್‌ಕಾಯಿ ತೆಗೆಯಬೇಕ್ರಿ
ಹಸನಾದ ಮೊಸರು ಹಾಕಿ ಹೊಡೆಯಬೇಕ್ರಿ
ಕವನ ಬರೆದು ನನ್ ಬಾಯಿಲಿ ನೀರು ಬಂದ್ರಿ
ಕವನ ಓದಿದ ನಿಮ್ ಬಾಯಿಗೆ ಹೇಂಗಾತ್ರಿ
ಉಪ್ಪಿನ್ ಕಾಯಿ ಕವನ ಕೇಳಿ ಬಹುರುಚಿ.

– ಬಿಟ್ಟೀರ ಪದ್ಮ ರಾಮಯ್ಯ, ಮಡಿಕೇರಿ.

# ಯಾರು ಹೊಣೆ?

ಬೆಂಗಳೂರಿನ ಮಹಾನಗರದ ಭವ್ಯವಾದ ನೂತನ ಆಸ್ಪತ್ರೆಯಲ್ಲಿ ನಡೆದ ನಿಗೂಢ ಘಟನೆ. ಅಂದು ಶನಿವಾರ. 'ರಾಂಪ' ಎಂಬಾತನನ್ನು ಹಲವಾರು ಹಿತೈಷಿಗಳು ತಂದು ಆಸ್ಪತ್ರೆಗೆ ದಾಖಲು ಮಾಡಿದರು. ರಾಂಪನಿಗೆ ಹೃದಯಾಘಾತವಾಗಿದ್ದರಿಂದ ಎಮರ್‌ಜೆನ್ಸಿ ವಾರ್ಡ್‌ನಲ್ಲಿ ಚಿಕಿತ್ಸೆ ನೀಡಿ, ನಂತರ ಇಂಟೆನ್ಸಿವ್ ಕೇರ್ ಯೂನಿಟ್ (ICU)ಗೆ ವರ್ಗಾಯಿಸಲಾಯಿತು. ರಾಂಪನಿಗೆ ನಿದ್ರೆ ಬರಲು ಇಂಜೆಕ್ಷನ್ ನೀಡಿದರು. ಸ್ವಲ್ಪ ಸಮಯದ ನಂತರ ಡ್ಯೂಟಿ ಡಾಕ್ಟರಾದ ಡಾ|| ಗುಂಡೂರಾವ್ ರೌಂಡ್ಸ್‌ಗೆ ಬಂದರು. ಕೇಸ್ ಶೀಟ್ ಓದಿದ ಡಾಕ್ಟರ್ ಅಲ್ಲಿದ್ದ ನರ್ಸ್‌ನನ್ನು ಕುರಿತು 'ಸಿಸ್ಟರ್, ಇವನ್ನ ಈ ವಾರ್ಡ್‌ಗೆ ಯಾಕ್ರೀ ಹಾಕಿದ್ರಿ?" ಎಂದು ಪ್ರಶ್ನಿಸಿದರು. ಸಿಸ್ಟರ್ ತಬ್ಬಿಬ್ಬಾಗಿ, "ಅದು, ಡಾ|| ಶೇಷಾದ್ರಿ ಸಜೆಸ್ಟ್ ಮಾಡಿದ್ರು' ಎಂದಳು.

"But you know, tomorrow is a Sunday!' ಎಂದರು ಗುಂಡೂರಾವ್.

"My God. ನನಗೂ ಹೊಳೀಲೇ ಇಲ್ಲಾ" ಎಂದ ಸಿಸ್ಟರ್ ಕೊಂಚ ಯೋಚಿಸಿ "ಇವರ್ನ immediate ಆಗಿ ಬೇರೆ ವಾರ್ಡಿಗೆ shift ಮಾಡಿಸ್ಲಾ ಡಾಕ್ಟರ್?" ಎಂದು ಕೇಳಿದಳು. "ಏನೂ ಬೇಡ, ಈ ಪೇಷಂಟ್‌ಗೆ ಅಷ್ಟು ಸೀರಿಯಸ್ ಆಗಿ ಏನೂ ಆಗಿಲ್ಲ, he had a very mild heart attack. Let's take a chance this time". ಅಂತ ಹೇಳಿ ಡಾಕ್ಟರ್ ಹೊರಟು ಹೋದರು. ಸಿಸ್ಟರ್ ಅಲ್ಲೇ ಯೋಚಿಸುತ್ತಾ ನಿಂತುಬಿಟ್ಟಳು.

ರಾಂಪ ನಿದ್ರಿಸುತ್ತಿದ್ದ. ಆತನಿಗೆ ಉಸಿರಾಟ ಸರಾಗವಾಗಲು Life Support System ಅಳವಡಿಸಲಾಗಿತ್ತು. ಸುತ್ತಲೂ ಕಂಪ್ಯೂಟರ್ ಮತ್ತಿತರ ಉಪಕರಣಗಳು ಅವನ ಹೃದಯದ ಬಡಿತದ ಗತಿಯನ್ನು ನಮೂದಿಸುತ್ತಿದ್ದವು. 'ಮರುದಿನ ಭಾನುವಾರ, ಈ ಪೇಷಂಟ್ ಕೂಡ ಸತ್ತು ಹೋದರೆ?' ಎಂಬ ಪ್ರಶ್ನೆ ಸಿಸ್ಟರ್‌ನ ಮನದಲ್ಲಿ ಕಳವಳ ಮೂಡಿಸಿತು. ಯಾಕೆಂದರೆ, ಕಳೆದ 2 ತಿಂಗಳಿನಿಂದ, ಪ್ರತೀ ಭಾನುವಾರ ಸರಿಯಾಗಿ 11 ಗಂಟೆಗೆ ICU ವಾರ್ಡ್‌ನಲ್ಲಿದ ರೋಗಿಗಳೆಲ್ಲಾ ಸಾಯುತ್ತಾ ಬಂದಿದ್ದಾರೆ. ಚೆನ್ನಾಗಿ ಚೇತರಿಸಿಕೊಳ್ಳುವ ಲಕ್ಷಣಗಳಿದ್ದ ರೋಗಿಗಳು ಕೂಡ ಭಾನುವಾರ ಬೆಳಿಗ್ಗೆ ಕಾರಣವಿಲ್ಲದೆ ಸತ್ತುಹೋಗುತ್ತಿದ್ದುದು ಆಸ್ಪತ್ರೆಯ ವೈದ್ಯರಿಗೆ ನುಂಗಲಾರದ ತುತ್ತಾಗಿತ್ತು. ಊರಿನಲ್ಲಿ ನಿಧಾನವಾಗಿ ಈ ವಿಷಯ ವಿಷಾನಿಲದಂತೆ ಹರಡುತ್ತಾ ಆಸ್ಪತ್ರೆಗೆ ಕೆಟ್ಟ ಹೆಸರು ಬರುವ ಸಾಧ್ಯತೆಯಿತ್ತು. ಈ ಬಾರಿ ಏನು ಕಾದಿದೆಯೋ ಎಂದು ಯೋಚಿಸುತ್ತಾ ಸಿಸ್ಟರ್ ನಿಟ್ಟುಸಿರು ಬಿಟ್ಟು, ICU ಚೇಂಬರಿನ ಬಾಗಿಲು ಹಾಕಿಕೊಂಡು ಹೊರನಡೆದಳು.

ಡಾ|| ಗುಂಡೂರಾವ್‌ಗೆ ಅಂದು ರಾತ್ರಿ ನಿದ್ದೆ ಹತ್ತಲಿಲ್ಲ. 'Lets take a chance this time' ಎಂದು ಅವರು ಸಿಸ್ಟರ್‌ಗೆ ಹೇಳಿದ ವಾಕ್ಯ ಅವರ ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು. ಕಳೆದ 2 ತಿಂಗಳಿನಲ್ಲಿ 6 ಜನರು ವಿನಾಕಾರಣ ಮೃತರಾಗಿರುವಾಗ ಮತ್ತೆ 'chance' ತೆಗೆದುಕೊಳ್ಳುವುದು ಮೂರ್ಖತನ ಎಂದು ಅವರ ಮನಸ್ಸು ಸಾರಿ ಸಾರಿ ಹೇಳುತ್ತಿತ್ತು. ತುಂಬ ಹೊತ್ತು ನಿದ್ರೆ ಹತ್ತದೆ ಶತಪತ ಹಾಕಿದ ನಂತರ ಅವರು ಒಂದು ನಿರ್ಧಾರಕ್ಕೆ ಬಂದರು. ಕೈಲಿದ್ದ ಸಿಗರೇಟನ್ನು ಆಷ್‌ಟ್ರೇಗೆ ತುರುಕಿ, ಫೋನ್ ರಿಸೀವರ್ ಕೈಗೆ ತೆಗೆದುಕೊಂಡು ಕಾರ್ಯನಿರತರಾದರು.

ಭಾನುವಾರ ಬೆಳಿಗ್ಗೆ, ಎಂದಿನಂತೆ ಆಸ್ಪತ್ರೆ ತುಂಬಾ ಜನರ ಗಿಜಿಗಿಜಿ, ಅಂಬುಲೆನ್ಸ್‌ಗಳ ಓಡಾಟ, ವ್ಹೀಲ್ ಚೇರ್‌ಗಳ ಎಳೆದಾಟ, ಕುಂಟುತ್ತಾ ನಡೆವ ರೋಗಿಗಳು, ಭುಜ ಕೊಟ್ಟು ನಡೆವ ಮನೆಯವರು, ಸಪ್ಪೆ ಮೋರೆಯ ರೋಗಿಗಳು, ಹಾಸಿಗೆಯಿಂದ ಎದ್ದು ಕುಳಿತು ಬ್ರೆಡ್-ಕಾಫಿ ಸೇವಿಸುವ ರೋಗಿಗಳು; ಮತ್ತು ಟಾಕುಟೀಕಾಗಿ ಬಿಗಿ ಉಡುಪು ಧರಿಸಿ ಓಡಾಡುವ ನರ್ಸ್‌ಗಳು, ಗುಡ್‌ಮಾರ್ನಿಂಗ್‌ಗಳನ್ನು ಸ್ವೀಕರಿಸುತ್ತಾ ಜೇಬಿನಲ್ಲಿ ಕೈಹಾಕಿ ನೆಡೆದಾಡುವ ಡಾಕ್ಟರ್‌ಗಳು ಎಲ್ಲೆಡೆ ಕಾಣಸಿಗುತ್ತಿದ್ದರು. ಒಂದು ಮೂಲೆಯಲ್ಲಿ ರಾಂಪನ ಮನೆಯವರು ಪೆಚ್ಚು ಮೋರೆ ಹಾಕಿಕೊಂಡು ಕಾತರದಿಂದ ಕುಳಿತು ಕಾಯುತ್ತಿದ್ದರು.

ಈ ಎಲ್ಲಾ ಸದ್ದುಗದ್ದಲದಿಂದ ದೂರದ ಒಂದು ಪ್ರತ್ಯೇಕವಾದ ಕೊಠಡಿಯಲ್ಲಿ ಡಾ|| ಗುಂಡೂರಾವ್, ಡಾ|| ಶೇಷಾದ್ರಿ ಒಂದಿಬ್ಬರು ಸಿಸ್ಟರ್‌ಗಳೂ ಹಾಗೂ ಇನ್ನೂ ಹತ್ತಾರು ಮಂದಿ ಪ್ರತಿಷ್ಠಿತ ವೈದ್ಯರು TV ಪರದೆಯನ್ನು ತದೇಕಚಿತ್ತದಿಂದ ದಿಟ್ಟಿಸುತ್ತಾ ಕುಳಿತಿದ್ದರು. TVಯಲ್ಲಿ ಮಿಸುಕಾಡದ ಒಂದೇ ಚಿತ್ರ -ರಾಂಪನನ್ನು ಮಲಗಿಸಿದ್ದ ICU ಚೇಂಬರ್. ರಾಂಪನ ಕೋಣೆಗೆ ವಿಡಿಯೋ ಕ್ಯಾಮೆರಾ ಅಳವಡಿಸಲಾಗಿತ್ತು. ಪ್ರತೀ ಭಾನುವಾರ, ಅದರಲ್ಲೂ ಸರಿಯಾಗಿ 11 ಗಂಟೆಯ ಆಸುಪಾಸಿಗೆ ರೋಗಿಗಳು ಯಾವುದೇ ಮುನ್ಸೂಚನೆ ಯಿಲ್ಲದೆ ಹಠಾತ್ ಸಾಯುತ್ತಿದ್ದುದರ ನಿಗೂಢ ರಹಸ್ಯವನ್ನು ಕಂಡು ಹಿಡಿದೇ ತೀರಬೇಕೆಂಬ ಹಂಬಲದಿಂದ ಅವರೆಲ್ಲರೂ ಅಲ್ಲಿ ಸೇರಿದ್ದರು. ಏನಾದರೂ ಅಲೆದಾಡುವ ಪ್ರೇತಾತ್ಮಗಳು ಅಲೌಕಿಕ ಕೈವಾಡ ಇದ್ದರೂ ಇರಬಹುದೆಂದು ನಂಬಿದ್ದ ಒಂದಿಬ್ಬರು, ಕ್ರಿಸ್ತನ ಶಿಲುಬೆಯನ್ನು ಹಾಗೂ ಬೈಬಲ್ ಪುಸ್ತಕವನ್ನು ಹಿಡಿದುಕೊಂಡು ಕುಳಿತಿದ್ದರು.

ಗೋಡೆಯಲ್ಲಿ ಗಡಿಯಾರ 11 ತೋರಿಸುತ್ತಿತ್ತು. ವೈದ್ಯರೆಲ್ಲರೂ ಕಾತುರದಿಂದ TV ಪರದೆಯನ್ನೇ ದಿಟ್ಟಿಸುತ್ತಿರುವಾಗ, ರಾಂಪ ಮಲಗಿದ್ದ ಹಾಸಿಗೆಯ ಮೇಲೆ ಜಗ್ಗನೆ ಬೆಳಕು ಚೆಲ್ಲಿದಂತಾಯಿತು. ನೆರೆದವರೆಲ್ಲಾ ಉಸಿರು ಹಿಡಿದು ಕಣ್ಣಗಲಿಸಿ ಕಾಯುತ್ತಿದ್ದಾರೆ. ICU ಚೇಂಬರಿನ ಬಾಗಿಲು ತೆರೆದುಕೊಂಡಿತು. ಮುನಿವೆಂಕಟ ಎಂಬ part-time sweeper ಹುಡುಗ vaccum cleaner ಒಂದನ್ನು ಎಳೆದುಕೊಂಡು ರೂಮಿನೊಳಗೆ ಪ್ರವೇಶಿಸಿದ. ಪ್ರತೀ ಭಾನುವಾರದಂದು ಆಸ್ಪತ್ರೆಯ ಎಲ್ಲಾ ಕೊಠಡಿಗಳನ್ನು ಕ್ಲೀನ್ ಮಾಡುವುದು ಅವನ ಕೆಲಸ. ಅಲ್ಲಿ ಇಲ್ಲಿ ಧೂಳು ಹೊಡೆದ ನಂತರ ಮುನಿವೆಂಕಟ ಸೀದಾ ಹೋಗಿ Life support system ಅಳವಡಿಸಿದ್ದ ಪ್ಲಗ್ಗನ್ನು ಕಿತ್ತುಹಾಕಿ Vaccum cleaner ಪ್ಲಗ್ಗನ್ನು ಚುಚ್ಚಿ ಕೊಠಡಿಯನ್ನು ಕ್ಲೀನ್ ಮಾಡಲಾರಂಭಿಸಿದ. ನೆರೆದ ವೈದ್ಯರಿಗೆ ಅಲ್ಲಿ ಏನು ನಡೆಯಿತು ಎಂಬುದನ್ನು ಊಹಿಸಿ ದಂಗು

20ನೇ ಪುಟಕ್ಕೆ

# ಆತ್ಮ ಇದೆಯೋ ಇಲ್ಲವೋ?

ಜೀವನದಲ್ಲಿ ಪ್ರತಿಯೊಬ್ಬ ಮಾನವನು-ನಾನು ಮತ್ತು ನನ್ನದು-ಎಂದು ಎರಡು ಪದಗಳನ್ನು ಬಳಸುತ್ತಾನೆ. ನನ್ನದು ಎಂಬ ಪದವನ್ನು ದೇಹಕ್ಕೆ ಮಾತ್ರ ಬಳಸುತ್ತೇವೆ. ಆದರೆ ನಾನು ಎಂಬ ಮಾತನ್ನು ಆತ್ಮಕ್ಕೆ ಬಳಸುತ್ತೇವೆ.

ಜಗತ್ತಿನಲ್ಲಿ ಹೂ, ಕಬ್ಬುಗಳು ಕಾಣುತ್ತೇವೆ-ಈ ಕಣ್ಣಿಗೆ. ಆದರೆ ಕಣ್ಣಿಗೆ ಕಾಣದಂತಹ ಹೂವಿನ ಸುಗಂಧವನ್ನು ಕಬ್ಬಿನ ಒಳಗಿರುವ ಸಿಹಿ-ಸಪ್ಪೆಯನ್ನು ವಿಜ್ಞಾನವು ಸ್ಪಷ್ಟಪಡಿಸದು. ಹಣಕ್ಕೂ ಅರಿವಾಗುವುದಿಲ್ಲ. ಏಕೆಂದರೆ ಅನುಭವ ಮಾಡುವ ಆತ್ಮವು ಅಲ್ಲಿರುವುದಿಲ್ಲ. ಸ್ಥೂಲವಾದ ದೇಹದಲ್ಲಿ ಕಣ್ಣಿಗೆ ಕಾಣದ ವಿಜ್ಞಾನಕ್ಕೂ ನಿಲುಕದ ಆತ್ಮವು ಇದೆ.

ಆತ್ಮದಲ್ಲಿ ಯೋಚಿಸುವ ಮನಸ್ಸು, ನಿರ್ಣಯಿಸುವ ಬುದ್ಧಿ ಮತ್ತು ಎಲ್ಲವನ್ನೂ ದಾಖಲು ಮಾಡಿಕೊಳ್ಳುವ ಸಂಸ್ಕಾರವು ಇದೆ. ಚಿಂತೆ, ದ್ವೇಷ, ಅಸೂಯೆ, ಹೊಟ್ಟೆಕಿಚ್ಚು ಇತ್ಯಾದಿಗಳು ಮನಸ್ಸಿನಲ್ಲಿರುವ ಅಥವಾ ಸಂಸ್ಕಾರದಲ್ಲಿ ದಾಖಲಾಗಿರುವ ನಕಾರಾತ್ಮಕ ಭಾವನೆಗಳೂ ಯಾರಿಗೂ ಬೇಕಿಲ್ಲ. ಶಾಂತಿ, ಸಂತೋಷ, ಸ್ನೇಹ, ದಯೆ ಮುಂತಾದ ಸಕಾರಾತ್ಮಕ ಭಾವನೆಗಳು ಎಲ್ಲರಿಗೂ ಬೇಕು, ಎಲ್ಲರಿಗೂ ಪ್ರಿಯ, ಇದನ್ನೇ ಪುಣ್ಯ ಎಂದೂ ಪುಣ್ಯಾತ್ಮನೆನ್ನುತ್ತೇವೆ. ಕೆಟ್ಟದಿದ್ದರೆ ಪಾಪಾತ್ಮ.

(1) ಅಂತಹ ಆತ್ಮವು ಜ್ಯೋತಿ ಸ್ವರೂಪಿಯಾಗಿದೆ. ಆದುದರಿಂದ ದೇಹವು ಶಾಖವಾಗಿದೆ. ಆತ್ಮದಲ್ಲಿ ಸಂಸ್ಕಾರವು ದಾಖಲಾಗಿರುತ್ತದೆ.

(2) ಆತ್ಮದಲ್ಲಿ ಪಾಪ ಪುಣ್ಯಕ್ಕನುಸಾರವಾಗಿ ದೇಹವನ್ನು ಪಡೆದುಕೊಳ್ಳುತ್ತದೆ. 5 ತಿಂಗಳು ಅಥವಾ 20 ವಾರಗಳಲ್ಲಿ ತಾಯಿಯ ಗರ್ಭದಲ್ಲಿರುವ ಪಿಂಡಕ್ಕೆ ಸೇರಿಕೊಳ್ಳುತ್ತವೆ. ಸಂಸ್ಕಾರಕ್ಕನುಸಾರವಾಗಿ ತನ್ನ ದೇಹವನ್ನು ಪಡೆದುಕೊಳ್ಳುತ್ತದೆ. ಕ್ಯಾಸೆಟ್‌ನಲ್ಲಿ ಯಾವ ಹಾಡು ಇದೆ ಎಂಬ ಸತ್ಯವು ಟೇಪು ಮೆಷಿನ್ ನಲ್ಲಿಟ್ಟಾಗ ಮಾತ್ರ ಗೊತ್ತಾಗುತ್ತದೆ.

ಆತ್ಮವು ಮೆದುಳಿನ ಕೆಳಭಾಗದಲ್ಲಿರುವ ಹೈಪೋಥಲಮಸ್‌ನಲ್ಲಿ ಕುಳಿತುಕೊಂಡು ನರಗಳ ಮುಖಾಂತರ ಮೆದುಳಿಗೆ ವರ್ಗಾಯಿಸುತ್ತದೆ.

(3) Transferನಂತರ ಕೆಲವರು ಕೂಡಲೆ Duty report ಮಾಡಿಕೊಂಡು ಒಂದು ವಾರದ ನಂತರ ಮತ್ತೆ ಆ ಸ್ಥಳಕ್ಕೆ ಹೋಗುತ್ತಾರೆ. ಹಾಗೆಯೇ ಆತ್ಮನೂ ಕೂಡ ದೇಹವನ್ನು ತ್ಯಜಿಸಿ, ಕೂಡಲೇ ಹೋಗಿ ಹಿಂದಕ್ಕೆ ಬಂದು 10 ದಿನಗಳಿಂದ 40 ದಿನಗಳವರೆಗೆ ಇನ್ನೊಂದು ದೇಹವನ್ನು ಪಡೆಯುತ್ತದೆ. ಅಪಘಾತಕ್ಕೊಳಗಾದ ವ್ಯಕ್ತಿಯ ಆಯಸ್ಸು ಇನ್ನು ಮುಗಿಯದಿದ್ದಲ್ಲಿ, ಆಯಸ್ಸು ಮುಗಿಯುವ ತನಕ ಬೇರೆ ದೇಹದಲ್ಲಿ ಸೇರಿಕೊಂಡು-ಭೂತ, ಗಾಳಿ, ದೇವರು-ಎಂದು ಪಾತ್ರ ಮಾಡುತ್ತದೆ. ಆಯಸ್ಸು ಮುಗಿದ ನಂತರ ಆತ್ಮನು ಬೇರೆ ದೇಹವನ್ನು ಪಡೆದುಕೊಳ್ಳುತ್ತದೆ. ಈ ಬಗ್ಗೆ ವ್ಯಕ್ತಿಗತವಾಗಿ ಚಿತ್ರಗಳ ಮೂಲಕ ಅರಿತುಕೊಳ್ಳಲು ಪ್ರಯತ್ನಿಸಲಾಗಿದೆ.

(4) ಪುನರ್ ಜನ್ಮವು ಇದೆ. ದೇಹವು ಸಾಯುತ್ತದೆ. ಆದರೆ ಆತ್ಮವು ಸಾಯದು. ಒಂದು ಊರಿನಲ್ಲಿರುವ ಒಬ್ಬ ವ್ಯಕ್ತಿ ಒಂದು ಬಾಡಿಗೆ ಮನೆಯನ್ನು ಬಿಟ್ಟು ಇನ್ನೊಂದು ಮನೆಯನ್ನು ಪಡೆದುಕೊಂಡಂತೆ. ಹಿಂದಿನ ದಿನದ ಮಾತುಗಳು ಮರೆಯುತ್ತವೆ. ಆದರೆ ಹತ್ತಾರು ತಿಂಗಳ ವಿಚಾರಗಳು ಮರೆಯಲು ಸಾಧ್ಯ. ಕೆಲವು ಆತ್ಮಗಳಲ್ಲಿ ಆ ಸಂಸ್ಕಾರವು ತುಂಬಾ ಪ್ರಬಲವಾಗಿದ್ದರೆ, ಮುಂದಿನ ಜನ್ಮದಲ್ಲೂ ನೆನಪಾಗುತ್ತವೆ.

(5) ಪುನರ್ ಜನ್ಮವು ಇದೆ ಎಂದು ಹೇಳುವ ತಾವೇ ಸತ್ಯವನ್ನು ಒಪ್ಪಿಕೊಂಡಿರುವಿರಿ. ಆತ್ಮವು ಹತ್ತಿರದ ಸಂಬಂಧದಲ್ಲಿ ಹೆಚ್ಚಾಗಿ ಪುನರ್ ಜನ್ಮದಲ್ಲಿ ಬರುತ್ತದೆ. ಆದುದರಿಂದ ಹತ್ತಿರದಲ್ಲೇ ಜನ್ಮ ಪಡೆಯುತ್ತದೆ. ಆದರೆ ಕೆಲವೊಮ್ಮೆ ನೂರು ಕಿ. ಮೀ. ನಿಂದ ಲಕ್ಷಾಂತರ ಕಿ. ಮೀ. ದೂರದವರೆಗೂ ಹೋಗುತ್ತದೆ.

(6) ಪುನರ್ ಜನ್ಮದಲ್ಲಿ ವಿಚಾರವು ಮರೆಯುವುದು ಕೂಡ ಒಂದು ವಿಶೇಷತೆಯಾಗಿದೆ. ಹಾಗೇನಾದರೂ ನೆನಪಿದ್ದರೆ ಕೆಲವೊಮ್ಮೆ ಅಪಾರವಾದ ಅನಾಹುತಗಳೂ ಕೂಡ ಆಗಲು ಸಾಧ್ಯ.

ಇದೊಂದು ವಿಜ್ಞಾನ. ಆಧ್ಯಾತ್ಮಿಕ ವಿಜ್ಞಾನ ಅಥವಾ ಅಭೌತಿಕ ವಿಜ್ಞಾನ. ಈ ಭೌತಿಕ ವಿಜ್ಞಾನಕ್ಕಿಂತಲೂ ಶ್ರೇಷ್ಠವಾಗಿರುವ ವಿಜ್ಞಾನವಾಗಿದೆ.

ಮಾನವನು ಕೇವಲ ಈ ಸತ್ಯವನ್ನು ಅರಿಯುವುದಷ್ಟೆ ಪ್ರಧಾನವಲ್ಲ. ಅವನಲ್ಲಿರುವ, ಅವನಿಗೆ ಬೇಡದ ರೋಗವನ್ನು ಸೃಷ್ಟಿಸುವ, ಸಮಸ್ಯೆಗಳನ್ನು ಸೃಷ್ಟಿಸುವ ನಕಾರಾತ್ಮಕ ಭಾವನೆಗಳಿಂದ ಮುಕ್ತನಾಗಿ ಸಂಪೂರ್ಣ ಸುಖ ಶಾಂತಿ, ಆರೋಗ್ಯ, ಏಕಾಗ್ರತೆ, ಸಮಾನತೆ, ಸಹೋದರ ಭಾವನೆ, ಸದ್ಭಾವನೆಗಳನ್ನು ಬೆಳೆಯಿಸಿಕೊಂಡು ಸಂತೋಷದ ಜೀವನ ನಡೆಸಲು ಇಲ್ಲೊಂದು ಮಾರ್ಗವಿದೆ. ತಮ್ಮ ಎಲ್ಲಾ ಸಮಸ್ಯೆಗಳಿಗೂ ಸಮಾಧಾನವು ದೊರೆಯುವುದು ಇಲ್ಲಿ : ಪ್ರಜಾಪಿತ ಬ್ರಹ್ಮಕುಮಾರಿ ಈಶ್ವರೀಯ ವಿಶ್ವವಿದ್ಯಾಲಯ

**(ಬರೆದವರು : ಶ್ರೀಮತಿ ಚೀಯಂಡಿ ರಾಧಯಾದವ,
ಮಡಿಕೇರಿ)**

**(ಕೊಡಗು ಸಂಗಾತಿ, ಪಾಕ್ಷಿಕ ಪತ್ರಿಕೆ ತಾ. ಜುಲೈ 1 ರಿಂದ 31, 2001 ಶಿರೋನಾಮೆ "ವಾಸ್ತವವೋ, ಅವಾಸ್ತವವೋ ಗೊತ್ತಿದೆಯಾ" ಇದಕ್ಕೆ ಸಂಬಂಧಿಸಿದ ಲೇಖನ.)**

---

## ನಗೆ ಮಾತ್

ಹೆಂಣ್ : ನೀವ್ ಇಲ್ಲೇನ್ ಮಾಡ್ತ ವಳರಿ ?

ಗಂಡ : ತಪಸ್ಸ್ ಮಾಡ್ತವಳೆನೆ

ಹೆಂಣ್ : ಈಗ ತಪಸ್ಸ್ ಮಾಡ್ದರೆ ಏನ್ ಫಲ ? ರಂಭೆ, ಊರ್ವಸಿ, ಮೇನಕೆ ಎಲ್ಲಾ ಅಜ್ಜಿಕಾ[illegible]. ಸುಮ್ಮನೆ ಬಾಯಿ ಮುಚ್ಚಿ ಮನೆಗೆ ಬನ್ನಿ.

ಮುಕ್ಕಾಟಿ ಮೋಹನ ಕಾರ್ಯಪ್ಪ
ಮರಗೋಡು

---

9ನೇ ಪುಟದಿಂದ

ಇಲ್ಲವೇ ಒಕ್ಕೂಟವು ಮಾಡಬೇಕು. ಈ ವಿಷಯವನ್ನು ಕಾರ್ಯಗತ ಮಾಡುವುದು ಬಾಯಲ್ಲಿ ಹೇಳುವಷ್ಟು ಸುಲಭವಲ್ಲ.

ಇದನ್ನು ಕಾರ್ಯಗತ ಮಾಡಲು ಶ್ರದ್ಧೆಯಿಂದ ಕೆಲಸ ಮಾಡುವ ಕಾರ್ಯಕರ್ತರು ಬೇಕು. ಇದರ ಹೋರಾಟ ನಿರಂತರವಾಗಿ ನಡೆಯಬೇಕು. ಹೀಗಾದರೆ ಮಾತ್ರ ಸಂವಿಧಾನದ 15(4) 16(4) ವಿಧಿಯ ಸಲಕರಣೆಗಳನ್ನು ಜನಾಂಗದ ಯುವಕ-ಯುವತಿಯರು ಪಡೆಯುವಂತಾಗಬಹುದು.

ಇದನ್ನ ಜನರಿಗೆ ತಿಳಿಸುವುದಕ್ಕಾಗಿಯೇ ಬೆಂಗಳೂರಿನ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದವರು ಕರ್ನಾಟಕ ಹಿಂದುಳಿದ ಆಯೋಗ ಮತ್ತು ಕೇಂದ್ರದ ಹಿಂದುಳಿದ ಆಯೋಗಕ್ಕೆ ಕೊಟ್ಟ ಮಾಹಿತಿಯ ಅಂಕಿ ಅಂಶಗಳನ್ನು ಕೊಟ್ಟಿದ್ದೇನೆ. ಇದನ್ನು ಸಂಬಂಧಪಟ್ಟ ಸಂಸ್ಥೆಗಳು ಗಮನದಲ್ಲಿಟ್ಟು ಅಂಕಿ ಅಂಶಗಳನ್ನು ಗ್ರಾಮವಾರು ಸಂಗ್ರಹಿಸಿದರೆ ವಾಸ್ತವವಾದ ಅಂಕಿ ಅಂಶಗಳ ಪಟ್ಟಿ ನಮ್ಮ ಸಂಸ್ಥೆಗಳಲ್ಲಿದ್ದಾಗೆ ಆಗಬಹುದೆಂಬ ಆಸೆಯಿಂದ ಈ ಲೇಖನವನ್ನು ಬರೆಯುತ್ತಿದ್ದೇನೆ. ಒಂದು ಗಮನಾರ್ಹ ವಿಷಯ ವೇನೆಂದರೆ 19-12-2000ದಲ್ಲಿ ನಡೆದ ಕೇಂದ್ರದ ಆಯೋಗದ ವಿಚಾರಣೆಯಲ್ಲಿ ಕೊಡಗಿನ್ನಿಂದಲೂ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಿಂದ ತುಂಬಾ ಸಂಖ್ಯೆಯಲ್ಲಿ ಗೌಡರು ಭಾಗವಹಿಸಿದ್ದರು. ಅದರಲ್ಲೂ ಕೊಡಗಿನಿಂದ, ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ ಗೌಡ ಸಮಾಜ, ಗೌಡ ಸಂಸ್ಕೃತಿ ಅಕಾಡೆಮಿಯವರು ಹಾಗೂ ಕೊಡಗು ಗೌಡ ಮಹಿಳಾ ಒಕ್ಕೂಟದ ಸದಸ್ಯರು ಹೆಚ್ಚಿನ ಹುರುಪಿನಿಂದ ಭಾಗವಹಿಸಿ ಆಯೋಗದ ಕಾರ್ಯಕಲಾಪಗಳನ್ನು ನಿರೀಕ್ಷಿಸಿದ್ದು ನನಗೆ ತುಂಬಾ ಸಂತಸವನ್ನುಂಟು ಮಾಡಿತು.

---

18ನೇ ಪುಟದಿಂದ

ಬಡಿದಂತಾಯಿತು. Life support system ಕಿತ್ತ ತಕ್ಷಣ ರಾಂಪನ ಉಸಿರಾಟ ಸ್ಥಗಿತಗೊಂಡಿರುತ್ತದೆ.

ಡಾ|| ಗುಂಡೂರಾವ್ "Oh my God!" ಎಂದು ಉದ್ಗಾರವೆಳೆದು ಕೂತಲ್ಲಿಂದ ತಟಕ್ಕನೆ ಎದ್ದು ರಭಸವಾಗಿ ಮೊದಲನೆ ಮಹಡಿಯಲ್ಲಿದ್ದ ICU ಚೇಂಬರಿನತ್ತ ಓಡಿದರು. ಅವರನ್ನು ಹಿಂಬಾಲಿಸಿ ವೈದ್ಯರ ದಂಡು ಓಡಿತು. ಎದುಸಿರು ಬಿಡುತ್ತಾ ದಾಪುಗಾಲು ಹಾಕಿಕೊಂಡು ಓಡಿ ಬಂದ ಡಾ|| ಗುಂಡೂರಾವ್ ICU ಚೇಂಬರಿನ ಬಾಗಿಲನ್ನು ದಢಾರನೆ ತೆಗೆದು ರಾಂಪನ ಬಳಿ ಓಡಿದರು. ಅವರನ್ನೂ ಹಾಗೂ ಅವರನ್ನು ಹಿಂಬಾಲಿಸಿ ಓಡಿ ಬಂದ ವೈದ್ಯರು ಮತ್ತಿತರನ್ನು ನೋಡಿ ಮುನಿವೆಂಕಟ ಗಾಬರಿಯಾಗಿ ನಿಂತುಬಿಟ್ಟ. 3 ಅಮೂಲ್ಯ ನಿಮಿಷಗಳ ಕಾಲ ಉಸಿರಾಡಲು ಒದ್ದಾಡಿದ್ದ ರಾಂಪನ ಪ್ರಾಣ ಪಕ್ಷಿ ಹಾರಿತ್ತು. ತನಗೇ ಅರಿವಿಲ್ಲದೆ ಅಮಾಯಕ ಮುನಿವೆಂಕಟ 7 ಸಾವುಗಳಿಗೆ ಕಾರಣವಾಗಿ ಹೋಗಿದ್ದ.

ಎಡಿಕೇರಿ ಸುದರ್ಶನ್, ಬೆಂಗಳೂರು

## ಬಡಜನ - 12

ಬೆಂಕಿ ಹತ್ತಿಕಂಡ್ ಮರ ಬೇಯಿದುರ ನೋಡಿಕೆ ಪೊರ್ಲ್. ಗಾಳಿಗೆ ಬೆಂಕಿ ಹತ್ತಿ ಉರಿಯೊದು ನೋಡಿಕೆ ಲಾಯಿಕ್. ಹಂಗೇ, ಸಿರಿ, ಸಂಪತ್ ಅಧಿಕಾರ ಇದ್‌ಕಂಡ್ ಮೆರೆವಂತ ಜನರ ನೋಡಿಕೆ ಲಾಯಿಕ್ ಇದ್ದದೆ. ಆದ್ರೇ ಬೆಂಕಿಲಿ ಮರ ಬೆಂದ್ ಹೋದಂಗೆ ಸಿರಿ, ಸಂಪತ್ ಅಧಿಕಾರದ ಮನುಷ್ಯ ಹಾಳಾದೆ. ಯಾಕೆತ್ತೇಳಿರೆ ಐಶ್ವರ್ಯ ತುಂಬ ಇದ್ದಲ್ಲಿ ಮನುಷ್ಯತ್ವ ಕಮ್ಮಿ ಇದ್ದದೆ. ನಾನೇ ಎಲ್ಲದಕ್ಕಿಂತ ಮೇಲ್ತ್ತೇಳುವ ಅಹಂಭಾವ ಅವನಲ್ಲಿದ್ದದೆ. ಅದೇ ಅವನ ಗರ್ವ, ಅಹಂಕಾರಕ್ಕೆ ಕಾರಣ ಆಗಿ, ಸಂಸಾರ ಬಾಂಧವ್ಯ, ಮನುಷ್ಯತ್ವ ಕಮ್ಮಿ ಆದೆ. ಈ ಮನುಷ್ಯತ್ವ ಕಮ್ಮಿ ಆಕ್ಕಾಕನ ದಯೆ, ಕರುಣೆ, ತ್ಯಾಗ, ಸಹಕಾರ, ಇಲ್ಲದಾದೆ. ಇದರ ನಾವು ಸಮಾಜನ ಸೂಕ್ಷ್ಮ ಆಗಿ ಪರೀಕ್ಷೆ ಮಾಡಿರೆ ಅರ್ಥ ಆದೆ. ಅದೇ ಬಡಜನ ಗರೀಬರಲ್ಲಿ ಪ್ರೀತಿ, ವಿಶ್ವಾಸ, ಭಕ್ತಿ, ದಯೆ, ಸಹನೆ, ಕರುಣೆ, ಮತ್ತೆ ಉದಾರ ಮನ್ಸ್, ಮುಖ್ಯವಾಗಿ ಮನುಷ್ಯತ್ವ, ಇಂಥಾಹ ದೇವಗುಣ ಜಾಸ್ತಿ ಇದ್ದದೆ. ಇದೇ ದೇವರ ವಿಚಿತ್ರ ಸೃಷ್ಟಿತ್ತೇಳೊಕು.

ಕೊಡವ ಭಾಷೆ : ಚೆಂದ್ರಿಮಾಡ.ಜಿ.ಮುತ್ತಪ್ಪ

ಅರೆಭಾಷೆಗೆ : ಪಟ್ಟಡ ಪ್ರಭಾಕರ

---

## ನಿಧನ

ಬೆಂಗಳೂರಿನ ನಿವಾಸಿ ಚೆಟ್ಟಿಮಾಡ ಕಾರ್ಯಪ್ಪನವರ ಧರ್ಮಪತ್ನಿಸುಮಿತ್ರರವರು ದಿನಾಂಕ 25-7-2001ರಂದು ಬೆಂಗಳೂರಿನಲ್ಲಿ ನಿಧನರಾದರು. ಇವರಿಗೆ 35 ವರ್ಷ ಪ್ರಾಯ ವಾಗಿತ್ತು. ಪತಿ ಮತ್ತು ಇಬ್ಬರು ಪುತ್ರರನ್ನು ಹಾಗೂ ಅಪಾರ ಬಂಧು ವರ್ಗದವರನ್ನು ಅಗಲಿದ್ದ ಇವರ ಪತಿ ಕಾರ್ಯಪ್ಪನವರು ಇಂಡಿಯನ್ ಆರ್ಮಿಯಲ್ಲಿ ಸುಭೇದಾರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

- ಸಂಗಾತಿ

ಸೋಮವಾರಪೇಟೆ ತಾಲ್ಲೂಕು ಎಡುಂಡೆ ಗ್ರಾಮದ ಪೆರ್ಬಾಯಿ ದಿ|| ಅಯ್ಯಣ್ಣನವರ ಧರ್ಮಪತ್ನಿ ಚಿಣಮ್ಮನವರು ದಿನಾಂಕ 30-7-2001ರಲ್ಲಿ ಎಡುಂಡೆ ಗ್ರಾಮದ ಸ್ವಗೃಹದಲ್ಲಿ ವೈಕುಂಠವಾಸಿಯಾದರು. ಇವರು 2 ಗಂಡು 3 ಹೆಣ್ಣು ಮಕ್ಕಳು ಮೊಮ್ಮಕ್ಕಳು ಮತ್ತು ಮರಿ ಮಕ್ಕಳಲ್ಲದೆ ಅಪಾರ ಬಂಧು ವರ್ಗವನ್ನು ಅಗಲಿದ್ದಾರೆ. ಇವರಿಗೆ 95 ವರ್ಷ ಪ್ರಾಯವಾಗಿತ್ತು ಎಂದು ತಿಳಿದುಬಂದಿದೆ.

- ಪಟ್ಟಡ ಪದ್ಮದೇವಯ್ಯ

ಬೆಂಗಳೂರು ವಾಸಿ ಅಚ್ಚುಡ ಪೂವಯ್ಯನವರ ಮಗ ಹರೀಶ್ (ಇಂಜಿನಿಯರ್) ಇವರ ಧರ್ಮಪತ್ನಿ ಬೀನಾ (ಅಂಚೆ ನೌಕರಿ) ಬೆಂಗಳೂರು ಇವರು ದಿನಾಂಕ 23-7-2001ರಲ್ಲಿ ರಸ್ತೆ ಅಪಘಾತದಲ್ಲಿ ಬೆಂಗಳೂರಿನಲ್ಲಿ ನಿಧನರಾದರು. ಇವರು ಪತಿ ಮತ್ತು 3 ವರ್ಷದ ಹೆಣ್ಣು ಮಗುವನ್ನು ಹಾಗೂ ಅಪಾರ ಬಂಧು ಬಾಂಧವರನ್ನು ಅಗಲಿದ್ದಾರೆ. ಇವರಿಗೆ 28 ವರ್ಷ ಪ್ರಾಯವಾಗಿತ್ತು.

- ಬೈತಡ್ಕ ಬೆಳ್ಯಪ್ಪ

---

Registered : 10-01-96 TCI Kar. 09592 Reg. No. KA/SK/MYS-88

## ಮೈಸೂರು ನಗರದ ಚಂದದಾರರ ಗಮನಕ್ಕೆ

ಮೈಸೂರು ನಗರದ ನಮ್ಮ ಕೊಡಗು ಸಂಗಾತಿ ಪತ್ರಿಕೆಯ ಚಂದದಾರರು ತಮ್ಮ ಚಂದಾ ಹಣ /ಜಾಹೀರಾತು ಇವುಗಳನ್ನು ಚೆಕ್ ಮೂಲಕ ನೇರವಾಗಿ ಸಂಗಾತಿ ಕಛೇರಿಗೆ ಕಳುಹಿಸುವುದು. ಮಾನ್ಯ ಚಂದದಾರರು ವಾಯಿದೆಗೆ ಸರಿಯಾಗಿ ನವೀಕರಿಸುವಂತೆ ವಿನಂತಿ.

ಪ್ರಕಟಣೆ : ಪ್ರಸರಣಾಧಿಕಾರಿ
ಕೊಡಗುಸಂಗಾತಿ
ಮೈಸೂರು - ☎ : 0821 / 516771

– ಸಂಪಾದಕಿ, ಕೊಡಗು ಸಂಗಾತಿ,
35, ಸವಿತಾ ನಿಲಯ, 1ನೇ ಕ್ರಾಸ್,
4ನೇ ಬ್ಲಾಕ್, ಜಯಲಕ್ಷ್ಮಿಪುರಂ,
☎ : 0821 - 516771

## ನಿಧನ

ಮಡಿಕೇರಿ ನಿವಾಸಿ ಬಾರಿಕೆ ಶ್ರೀ ಪೂಣಚ್ಚನವರು ದಿನಾಂಕ 9-7-2001 ರಲ್ಲಿ ನಿಧನರಾದರು. ಶ್ರೀಯುತರು ಪತ್ನಿ ಹಾಗೂ ಮಗ ಮತ್ತು ಮಗಳು ಅಲ್ಲದೆ ಅಪಾರ ಬಂಧು ವರ್ಗವನ್ನು ಅಗಲಿದ್ದಾರೆ. ಇವರಿಗೆ 65 ವರ್ಷ ಪ್ರಾಯವಾಗಿತ್ತು. ಅಲ್ಲದೆ ಗೌಡ ವಿದ್ಯಾ ಸಂಘದ ಮಾಜಿ ನಿರ್ದೇಶಕರಾಗಿಯೂ, ಲಯನ್ಸ್ ಕ್ಲಬ್‌ನ ಅಧ್ಯಕ್ಷರಾಗಿಯೂ ಕಾರ್ಯನಿರ್ವಹಿಸಿದ್ದಾರೆ.

– ಬೈತಡ್ಕ ಬೆಳ್ಯಪ್ಪ

## ನಿಧನ

ಮಂಡ್ಯದಲ್ಲಿ ವಾಸವಿರುವ **ಶ್ರೀ ದೇವಜನ ಶಿವಣ್ಣನವರು** ದಿನಾಂಕ 24-8-2001ರಂದು ಅಪರಾಹ್ನ 4 ಗಂಟೆಗೆ ಮಂಡ್ಯದ ಸರ್ಕಾರಿ ಆಸ್ಪತ್ರೆಯಲ್ಲಿ ನಿಧನರಾದರು. ಇವರಿಗೆ 76 ವರ್ಷ ಪ್ರಾಯವಾಗಿತ್ತು. ಮೃತರು ಪತ್ನಿ, ಪುತ್ರ ಹಾಗೂ ಇಬ್ಬರು ಪುತ್ರಿಯರನ್ನು ಮೊಮ್ಮಕ್ಕಳನ್ನು ಮತ್ತು ಅಪಾರ ಬಂಧು ಮಿತ್ರರನ್ನು ಅಗಲಿದ್ದಾರೆ. ಮೂಲತಃ ಕೊಡಗಿನ ಕಿರುದಾಡು ಗ್ರಾಮದವರು. ಇವರು ಮಂಡ್ಯದಲ್ಲಿರುವ ಗೌಡರ ಸಂತೋಷಕೂಟದ ಅಧ್ಯಕ್ಷರಾಗಿದ್ದರು ಮತ್ತು ಮಾಜಿ ಸೈನಿಕರೂ ಸಹ ಆಗಿದ್ದರು.

ಪುದಿನೆರವನ ತಮ್ಮಯ್ಯ, ಮಂಡ್ಯ

## ಮುನ್ನಡೆವ ಗೆಳೆಯರಿಗೆ

ನೋಡಿಲ್ಲಿ ಇವರನ್ನು ಈ ನನ್ನ ಗೆಳೆಯರನು
ಬೆಡಗಿಲ್ಲ ಇವರಲ್ಲಿ ಕೊಡಗಿನಾ ಕುವರರಲಿ
ಅಡಿಗಡಿಗೆ ತೋರುತಿವೆ ಭಕುತಿಯಾ ಸವಿ ಮೌನ
ಗುಡುಗಿಲ್ಲವೆನಬೇಡ ಬಾನಿನಾ ಮೋಡದಲಿ.
ಸಾಧುಗಳು ಇವರೆಂದು ಕಾದು ಕೆನಕಲುಬೇಡ
ಮಾದಕದ ದ್ರವದಂತೆ ತೋರುತಿಹರಿವರು
ಮಧುರವಾಣಿಯ ಸುರಿಸಿ ವದನದಲಿ ನಗೆಹರಿಸಿ
ಎದೆಯೊಡ್ಡಿ ನಿಲ್ಲುವರು ರಕುತವನು ಸುರಿಸಿ.
ರೂಪದಲಿ ಬಣ್ಣದಲಿ ತಿರುಳ ಕಾಣಲು ಬೇಡ
ಕೋಪವೇ ನಿನಗಿಂದು ಇವರನ್ನು ಕಂಡು?
ಅಪರಿಚಿತರಿವರೆಂದು ಅತ್ತ ಸರಿಯಲು ಬೇಡ
ಆಪ್ತ ಬಂಧುಗಳೆಂಬ ಭಾವನೆಯ ತೊರೆದು.
ಜ್ಞಾನದಲಿ ಮಾನದಲಿ ಮೇಲು ಮೇಲಾಗಿಹರು
ಏನಿಲ್ಲ ಇವರಲ್ಲಿ ಮಾನವರ ಗುಣವು?
ಹೀನ ಮನುಜರ ಗುಣವು ದೂಷಿಸುವ ದುರ್ಗುಣವು
ಇನಿಸಾದರಿಲ್ಲವೈ ಈ ನನ್ನ ಗೆಳೆಯರಲಿ.
ದೇವನಿರುವನು ಎಮ್ಮ ಕಾಯುತಿಹನಮ್ಮ
ಕೌವರಿಲ್ಲವು ಎಂದು ಕಾತರಿಸಬೇಡ
ದೇವಲೋಕದ ಪಟ್ಟ ಕಟ್ಟಿ ಮೆರೆಯುವೆ ಎಂದು
ಭಾವನೆಯ ತರಬೇಡ ಮೂಢಭಾವವ ತಂದು.

ಜ್ಞಾನಜ್ಯೋತಿಯ ಜನರು ಹತ್ತು ಸಾವಿರವಿರಲು
ಏನು ಯೋಚಿಸಬೇಡ ನಿನ್ನ ಹಿರಿಮೆಯ ತರಲು
ಕನಸು ರಾಜ್ಯದ ಪಟ್ಟ ಕಟ್ಟಿ ಮೆರೆದನು ತಿರುಕ
ಕನಸ್ಸೆದ್ದು ಶಪಿಸಿದನು ರಾಜ ಪದವಿಯ ಮರುಕ.
ಉಗುಳಿದೆಂಜಲ ರುಚಿಯ ತಿರುಗಿ ಸವೆಯಲು ಬೇಡ
ಕುಗ್ಗಿ ಪೋಪುದು ಹಿಗ್ಗಿದಗ್ಗಳಿಕೆ
ಗಗನ ಮುಟ್ಟಲು ನೀನು ಕರವ ನೀಡಲು ಬೇಡ
ಸೊಗವು ಇಲ್ಲದ ಗುರಿಯ ಗಾಳಿ ಗೋಪುರಕೆ.
ಓ ನನ್ನ ಗೆಳೆಯರೇ ಸಾಧು ಸಜ್ಜನರೇ
ಕಾನನದ ಗರ್ಜನೆಗೆ ಮಾರು ಹೋಗಲು ಬೇಡಿ
ಜೋಡು ಹಯಗಳ ಬಂಡಿ ಓಡು ಓಡುತಲಿರಲಿ
ಬಾಡಿ ಹೋಗಲು ಬೇಡಿ ಭಯದ ಭೀತಿಯ ಹೊಂದಿ.
ಕುಗ್ಗದೆಯೇ ಜಗ್ಗದೆಯೇ ನಿಮ್ಮ ಕಜ್ಜವಮಾಡಿ
ಅಗ್ಗದಾ ದೂಷಣೆಗೆ ಬಗ್ಗದೆಯೆ ಬಾಗದೆಯೇ
ಹಿಗ್ಗಿ ನಡೆಯಿರಿ ಮುಂದೆ ರವಿಯು ಉದಿಸುವವರೆಗೆ
ಸಗ್ಗದಾ ಅಗ್ಗಳಿಕೆ ಕಾದು ನಿಂದಿದೆ ನಿಮಗೆ.

ಕವನ : ಕೊಡಿಕಂಡಿರ.ಎ.ಪೊನ್ನಪ್ಪ (DII)
ವಕೀಲರು, ಮಡಿಕೇರಿ
(ಇವರ ಸವಿನೆನಪಿನಂತರಾಳದಿಂದ - 18-1-1968)

Reg. No. KA/SK/MYS-88 Registered : 10-01-96 TCI Kar. 09592

## ಕೊಡಗು ಸಂಗಾತಿಯ ಸುಲಭ ನವೀಕರಣಕ್ಕಾಗಿ ಸಂಪರ್ಕಿಸಿ

**ಕೊಡಗು ಸಂಗಾತಿ ಪತ್ರಿಕೆಯ ಚಂದದಾರರು ಈ ಕೆಳಕಾಣಸಿದ ನಮ್ಮ ಪ್ರತಿನಿಧಿಗಳಲ್ಲಿ ಹಣ ನೀಡಿ ನವೀಕರಿಸುವುದು. ಅಥವಾ ಸಂಗಾತಿ ಕಛೇರಿಗೆ ನೇರವಾಗಿ ಕಳಿಸುವುದು.**

**ಮೈಸೂರು** : **ಕೊಡಗು ಸಂಗಾತಿ**, 35 ಸವಿತಾ ನಿಲಯ, 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ☎ : 0821 - 516771

**ಮಡಿಕೇರಿ** : ಬೈತಡ್ಕ ಜಾನಕಿ, 21-16, LIC ಹತ್ತಿರ, ರೇಸ್‌ಕೋರ್ಸ್ ರಸ್ತೆ, ಮಡಿಕೇರಿ ☎ : 08272 / 516771

ಕುಂಭಗೌಡನ ಪ್ರವೀಣ್‌ಕುಮಾರ್, ವೆಜಿಟೇಬಲ್ ಶಾಪ್, ಪಾಂಡನ ಕಪೌಂಡ್, ಅಪ್ಪಯ್ಯಗೌಡ ರಸ್ತೆ, ಮಡಿಕೇರಿ.

**ಬೆಂಗಳೂರು** : ಕಲ್ಲುಮುಟ್ಲು ಬಸಪ್ಪ, 37, 3ನೇ ಮೈನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು - 19 ☎ : 080 - 6500946

**ಕುಶಾಲನಗರ** : ಕುಂಭಗೌಡನ ಸೋಮಣ್ಣ, ಮಯೂರಕೋಲ್ಡ್ ಸ್ಟೋರೇಜ್, ಮುಖ್ಯರಸ್ತೆ, ಕುಶಾಲನಗರ - 571 234, ☎ : 08276 - 73370

**ಗಾಳಿಬೀಡು** : ಕೋಳುಮುಡಿಯನ ಅನಂತ್ ಕುಮಾರ್, ಗಾಳಿಬೀಡು, ಗ್ರಾಮ, ಅಂಚೆ ☎ : 08272 / 65632

**ಪೆರಾಜೆ** : ಮಡ್ತಲೆ ಗೋಪಾಲ್, ಪೆರಾಜೆ ಗ್ರಾಮ ಅಂಚೆ, ಸಂಪಾಜೆ ☎ : 08272 - 34652 (R), 34388 (O)

**ಕುಂಬಳದಾಳು** : ಕುಂಜಿಲನ ರಾಜ, ಕುಂಬಳದಾಳು ಗ್ರಾಮ, ಅರ್ವತ್ತೊಕ್ಲು ಅಂಚೆ, ಮಡಿಕೇರಿ ತಾಲ್ಲೂಕು

**ಚೇರಂಬಾಣೆ** : ಪಾಣತ್ತಲೆ ರಾಮಪ್ಪ, ಪೋಸ್ಟ್ ಮಾಸ್ಟರ್, ಚೇರಂಬಾಣೆ, ☎ : 08272 - 35214

**ಭಾಗಮಂಡಲ** : ಸೂರ್ತಲೆ ಜಯಂತ, ಕ್ಲಾತ್ ಸ್ಟೋರ್, ಭಾಗಮಂಡಲ, ☎ : 08272 - 33268, Shop : 33214

**ಸಂಣ ಪುಲಿಕೋಟು** : ಕುಯ್ಯಮುಡಿ ಸುನೀಲ್, ಸಂಣಪುಲಿಕೋಟು ಗ್ರಾಮ, ಅಂಚೆ ☎ : 08272 / 30633

**ನಾಪೋಕ್ಲು** : ದುಗ್ಗಳ ಸದಾನಂದ ಗೌಡ, ರಮ್ಯ ಸ್ಟುಡಿಯೋ, ನಾಪೋಕ್ಲು

**ಮರಗೋಡು** : ಮಾಳಿಗೆ ಮನೆ ಜನಾರ್ಧನ, ಮರಗೋಡು ಗ್ರಾಮ, ಅಂಚೆ ಮಡಿಕೇರಿ ತಾಲ್ಲೂಕು ☎ : 08272 - 31511

**ಮಾಲ್ದಾರೆ ಗುಡ್ಲೂರು** : ಪಾರೆಮಜಲು ಮೋಹನ, ಮಾಲ್ದಾರೆ ಅಂಚೆ ☎ : 08272/59571

**ಸಿದ್ದಾಪುರ** : ವೀಜೆ ನರೇಂದ್ರ, ಶ್ರೀನಿವಾಸ್ ನ್ಯೂಸ್ ಏಜೆನ್ಸಿ, ಬಸ್ ಸ್ಟ್ಯಾಂಡ್ ☎ : 0874 - 58203 (S) 59212 (R)

**ವೀರಾಜಪೇಟೆ** : ಬಾರಿಕೆರ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೊಲ್ಡ್ ಸ್ಟೋರ್, ಖಾಸಗಿ ಬಸ್‌ನಿಲ್ದಾಣ, ವೀರಾಜಪೇಟೆ ☎ : 08276 - 56591

**ಸುಂಟಿಕೊಪ್ಪ** : ಪಟ್ಟೆಮನೆ ಶೇಷಪ್ಪ, ನ್ಯೂಸ್ ಏಜೆನ್ಸಿ, ಖಾಸಗಿ ಬಸ್ ನಿಲ್ದಾಣ, ಸುಂಟಿಕೊಪ್ಪ ☎ : 08276 - 62669

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.